# ಪ್ರೇಮ ಪಂಜರ

(ಸಣ್ಣ ಕಥೆಗಳು)

ಪಾವನಿ

ಧೃತಿ ಪ್ರಕಾಶನ
G3, ಹಯಗ್ರೀವ ಅಪಾರ್ಟ್‌ಮೆಂಟ್
1-2ನೇ ಮುಖ್ಯರಸ್ತೆ, 5ನೇ ಅಡ್ಡರಸ್ತೆ,
ನರಸಿಂಹರಾಜ ಕಾಲೋನಿ, ಬಸವನಗುಡಿ
ಬೆಂಗಳೂರು-560 019

**PREMA PANJARA (Short Stories Collection)**
Written by **PAVANI**
Published by : **DHRUTHI PRAKASHANA**
G3, Hayagreeva Apartment, 1-2nd Main Road
5th Cross, Narasimharaja Colony, Basavanagudi
Bangalore-560019

| | |
|---|---|
| ಪ್ರಥಮ ಮುದ್ರಣ | : 2008 |
| ಬೆಲೆ | : ರೂ. **95/-** |
| ಉಪಯೋಗಿಸಿದ ಕಾಗದ | : 70 ಜಿ.ಎಸ್.ಎಂ. ಮ್ಯಾಪ್‌ಲಿಥೋ |
| ಪುಟಗಳು | : 190 |
| ಮುಖಪುಟ | : ಆರ್ಟ್ ಫೋಕಸ್ |
| ಹಕ್ಕುಗಳು | : ಲೇಖಕರದ್ದು |

ಛಾಯಾಕ್ಷರ ಜೋಡಣೆ:
**ಕುಮುದ ಗ್ರಾಫಿಕ್ಸ್**, ಬೆಂಗಳೂರು.

ದೂ : 9945814774

ಮುದ್ರಣ:
ಅಶ್ವಿನಿ ಪ್ರಿಂಟರ್ಸ್
ಬೆಂಗಳೂರು

# ಎರಡು ಮಾತು

ಓದುಗರೇ ನಮಸ್ಕಾರಗಳು,

"ಪ್ರೇಮ ಪಂಜರ" ಇದೊಂದು ಕಥಾ ಸಂಕಲನ. ಸಣ್ಣ ಕತೆಗಳ ಗುಚ್ಛ. ನಾನು ಕತೆಯ ಪುಸ್ತಕಗಳನ್ನು ಓದುವ ಹವ್ಯಾಸವುಳ್ಳವಳು. ಓದುವಾಗ ನಾನೂ ಬರೆಯಬೇಕೆಂಬ ಮೂಡಿದ ಹಂಬಲ, ಕನಸುಗಳಲ್ಲಿ ಕಥಾ ರೂಪದಲ್ಲಿ ಕಣ್ಣ ಮುಂದೆ ಗೋಚರಿಸುತ್ತಿದ್ದವು. ಅವುಗಳನ್ನು ಹಾಳೆಯ ಮೇಲೆ ಗೀಚಿದ್ದು, ಈಗ ಹಸ್ತಪ್ರತಿಯ ರೂಪದಲ್ಲಿ ಶೇಖರಗೊಂಡು, ಪುಸ್ತಕರೂಪದಲ್ಲಿ ಪ್ರಕಟವಾಗುತ್ತಿದೆ.

ನನ್ನ ಬರಹವು ನಿಮ್ಮನ್ನು ಎಷ್ಟರ ಮಟ್ಟಿಗೆ ಮೆಚ್ಚಿಸುತ್ತದೆಂದು ನನಗೆ ಗೊತ್ತಿಲ್ಲ. ಆದರೆ ನನ್ನ ಮೊಟ್ಟ ಮೊದಲನೆಯ ಪ್ರಯತ್ನವನ್ನು ನೀವುಗಳು ಪ್ರೋತ್ಸಾಹಿಸುವಿರೆಂದು ನಂಬಿರುತ್ತೇನೆ. ಟೀಕೆ, ವಿಮರ್ಶೆಗಳಿದ್ದರೆ ಖಂಡಿತಾ ತಿಳಿಸಿ. ನನ್ನನ್ನು ನಾನು ತಿದ್ದಿಕೊಳ್ಳಲು ಸಹಾಯಕವಾಗುತ್ತದೆ.

ಧೃತಿ ಪ್ರಕಾಶನದ ಆತ್ಮೀಯ ಬಾಂಧವರಿಗೆ ನಾನು ಸದಾ ಋಣಿ. ಈ ಕಥಾಗುಚ್ಛವನ್ನು ಪ್ರಕಟಿಸುವ ಜವಾಬ್ದಾರಿಯನ್ನು ಹೊತ್ತಿರುವ ಪ್ರಕಾಶನದ ಬಳಗದವರೆಲ್ಲರಿಗೂ ನನ್ನ ಕೃತಜ್ಞತೆಗಳು.

ವಂದನೆಗಳು,

ಇತಿ ತಮ್ಮ ವಿಶ್ವಾಸಿ

**ಪಾವನಿ**

# ಅನುಕ್ರಮಣಿಕೆ

## ಕಾರ್ಮೋಡ ಸರಿದಾಗ...

**ಪೋ**ಲಿಸ್ ಇನ್‌ಸ್ಪೆಕ್ಟರ್ ಭಾಸ್ಕರ ಬ್ರಹ್ಮಚಾರಿಯಾಗಿದ್ದ. ತೆಳ್ಳಗೆ ನೋಡಲು ಸಾಧಾರಣ ರೂಪದವನಾಗಿದ್ದು ಯಾವಾಗಲೂ ಮೌನಿಯಾಗಿರುತ್ತಿದ್ದ. ಆದರೆ ಇದುವರೆಗೂ ಅವನು ಮದುವೆಯ ಬಗ್ಗೆ ಚಿಂತಿಸಲೇ ಇರಲಿಲ್ಲ. ಅವನ ಗುರಿ ಬೇರೆಯೇ ಆಗಿತ್ತು. ಅವನ ತಂದೆಯನ್ನು ಸಾವಿನ ದವಡೆಗೆ ನೂಕಿದ ವ್ಯಕ್ತಿ ಯಾರೆಂದು ಕಂಡು ಹಿಡಿದು, ಅವನ ಮೇಲೆ ಸೇಡನ್ನು ತೀರಿಸಿಕೊಳ್ಳಬೇಕಾಗಿತ್ತು.

ಅದಕ್ಕಾಗಿಯೇ ಅವನು ಪೋಲಿಸ್ ಇಲಾಖೆಗೆ ಸೇರಿಕೊಂಡಿದ್ದ. ಟ್ರೈನಿಂಗ್ ಸಮಯದಲ್ಲಿ ತನ್ನ ದೇಹವನ್ನು ಹೆಚ್ಚು ಹೆಚ್ಚು ದಂಡಿಸಿಕೊಳ್ಳುತ್ತಿದ್ದ. ಆದರೂ ದುಗುಡ ಕಡಿಮೆಯಾಗುತ್ತಿರಲಿಲ್ಲ. ರಾತ್ರಿಯ ಹೊತ್ತು ನಿದ್ದೆ ಬರುತ್ತಿರಲಿಲ್ಲ. ತನ್ನ ಈ ತಳಮಳ ತನ್ನ ಗುರಿ ತಲುಪಿದ ನಂತರವೇ ಕಡಿಮೆಯಾಗುತ್ತದೆಂದು ಅನ್ನಿಸುತ್ತಿತ್ತು.

ಟ್ರೈನಿಂಗ್ ಮುಗಿದ ಮೇಲೆ, ತನ್ನ ಹಳ್ಳಿಯ ಪೋಲಿಸ್ ಸ್ಟೇಷನ್‌ನಲ್ಲಿ ಇನ್‌ಛಾರ್ಜ್ ಆಗಿ ನೇಮಕಗೊಂಡಿದ್ದ. ಹಳ್ಳಿಯ ಸಮಸ್ಯೆಗಳಿಗೆ ಗಮನಕೊಟ್ಟು, ಅಪರಾಧಗಳು ಜರುಗದಂತೆ ಆದಷ್ಟು ನಿಗಾ ಇಡುತ್ತಿದ್ದ. ಅವನು ಹಳ್ಳಿಯಲ್ಲಿ ಹೆಸರು ಮಾಡಿದ. ಆದರೆ ಅದರಿಂದ ಅವನು ಸಂತುಷ್ಟನೂ ಆಗಲಿಲ್ಲ; ಗರ್ವಿಯೂ ಆಗಲಿಲ್ಲ. ಅವನ ಗಮನವೆಲ್ಲಾ ಆ ವ್ಯಕ್ತಿಯನ್ನು ಹುಡುಕುವ ಪ್ರಯತ್ನದಲ್ಲಿ, ತಾನೇ ಖುದ್ದಾಗಿ ಅಲ್ಲಿ ಇಲ್ಲಿ ಓಡಾಟ ನಡೆಸಿ, ಹುಡುಕಾಟವನ್ನು ಮುಂದುವರೆಸಿದ್ದ. ಸ್ವಲ್ಪ ಮಟ್ಟಿಗೆ ಪ್ರಯತ್ನವೂ ಸಫಲವಾಗಿತ್ತು.

ತನ್ನ ತಂದೆಯ ಸಾವಿಗೆ ಕಾರಣನಾದ ವ್ಯಕ್ತಿ ಭಾರಿ ಸ್ಮಗ್ಲರ್ ಎಂದು ತಿಳಿಯಿತು. ಅವನ ಮನೆ, ಪಕ್ಕದ ಹಳ್ಳಿಯಲ್ಲೇ ಇದೆಯೆಂದೂ, ಅವನು ತನ್ನ ಸಂಸಾರವನ್ನು ಅಲ್ಲಿ ಇಟ್ಟಿರುವನೆಂದೂ ತಿಳಿಯಿತು. ಅವನು ಬೇರೆಲ್ಲೋ ಇದ್ದ.

ಪಕ್ಕದ ಹಳ್ಳಿ ಸುಮಾರು ಇಪ್ಪತ್ತೈದು ಕಿಲೋ ಮೀಟರ್ ದೂರದಲ್ಲಿತ್ತು. ಸಾದಾ ಉಡುಪಿನಲ್ಲಿ ಆ ಹಳ್ಳಿಗೆ ಹೋಗಿ, ತನಗೆ ವಾಸ ಮಾಡಲು ಮನೆಯೊಂದು ಬೇಕೆಂದು... ಕೆಲವು ದಿನಗಳ ಮಟ್ಟಿಗೆ, ತನ್ನ ಸ್ವಂತ ಕೆಲಸಕ್ಕೆ ಅನುಕೂಲವಾಗಲು ಅಲ್ಲಿ ವಾಸ ಮಾಡುವುದಾಗಿ, ಅಲ್ಲಿಯ ಏಜೆಂಟ್‌ಗೆ ತಿಳಿಸಿದ. ಅವನು ಕೆಲವು

ಓನರ್‌ಗಳನ್ನು ಪರಿಚಯಿಸಿ ಕೊಟ್ಟ. ಅವನಿಗೆ ಒಂದು ಮನೆ ಹಿಡಿಸಿತು. ಆ ಮನೆಯ ಮಾಲೀಕನೂ ಒಳ್ಳೆಯವನಾಗಿ ಕಂಡ. ಇವನು ಅಲ್ಲಿಗೆ ಬಂದು ವಾಸಿಸತೊಡಗಿದ. ಅವನು ಕೆಲವು ದಿನಗಳ ಮಟ್ಟಿಗೆ ರಜವನ್ನು ಹಾಕಿದ್ದ...

ಕೆಲವೇ ದಿನಗಳಲ್ಲಿ ಅವನಿಗೆ ಪ್ರಿಯಾಳ ಪರಿಚಯನಾಗಿತ್ತು. ಚಿಕ್ಕ ವಯಸ್ಸಿನವಳಾದ ಪ್ರಿಯಾ, ನೋಡೋಕೆ ಆಕರ್ಷಕವಾಗಿದ್ದಳು. ಆಧುನಿಕ ಉಡುಗೆ ತೊಡುಗೆಗಳನ್ನುಟ್ಟು ಎಲ್ಲರೊಡನೆ ಬೆರೆಯುತ್ತಿದ್ದಳು. ಆದರೆ ಅಂತರಂಗದಲ್ಲಿ ಏನೋ ಖಿನ್ನತೆ ಇದೆ ಎಂದು ಮಾತುಕತೆಗಳಿಂದ ತಿಳಿಯುತ್ತಿತ್ತು... ಅವಳೊಡನೆ ಹೆಚ್ಚು ಹೆಚ್ಚು ಬೆರೆಯುತ್ತಿದ್ದ. ಅವಳಿಗೆ ಅವನ ಸಹವಾಸ ಇಷ್ಟವಾಯಿತು. ಇಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿದ್ದರು. ಆ ನಂತರವೇ ಅವನಿಗೆ ಪ್ರಿಯಾ ಆ ಸ್ಮಗ್ಲರ್‌ನ ಪತ್ನಿ ಎಂದು ತಿಳಿದದ್ದು. ತಕ್ಷಣಕ್ಕೆ ಪೆಚ್ಚಾದರೂ, ಅವಳ ಗೆಳೆತನವಾದದ್ದು ಒಳ್ಳೆಯದೇ ಆಯಿತು ಎಂದು ಕೊಂಡ. ಆಗಾಗ್ಗೆ ಭೇಟಿಯಾಗುತ್ತಿದ್ದುದರಿಂದ ಅವರ ಸ್ನೇಹ ಗಾಢವಾಯಿತು.

"ನೀವು ಇಂಥಾ ಹಳ್ಳಿಯಲ್ಲಿ ಬಂದು ಇರತೊಡಗಿದೀರಿ. ಅದರ ಉದ್ದೇಶ ಏನೂಂತ ಕೇಳಬಹುದಾ?" ಅವಳು ವೈಯಾರದಿಂದ ಕೇಳಿದಾಗ ಅವನು ನಕ್ಕು ಬಿಟ್ಟ.

"ಇದೇ ಪ್ರಶ್ನೆಯನ್ನು ನಾನು ನಿಮ್ಮನ್ನು ಕೇಳಿದರೆ?.."

"ಮೊದಲು ನಾನು ಪ್ರಶ್ನೆಯನ್ನು ಕೇಳಿದೀನಿ. ನನ್ನ ಪ್ರಶ್ನೆಗೆ ಮೊದಲು ಉತ್ತರ ಕೊಡಬೇಕಾದವರು ನೀವು..."

"ನನ್ನ ಉತ್ತರವನ್ನು ತಿಳಿದುಕೊಂಡ ಮೇಲೆ, ನೀವು ನಿಮ್ಮ ಉತ್ತರವನ್ನು ಹೇಳದೇ ಹೋಗಬಹುದು."

"ಇಲ್ಲ, ನಾನು ಅಂಥೋಳಲ್ಲ... ನನಗೆ ಇಷ್ಟವಾದವರಿಗೆ ನಾನು ಮೋಸ ಮಾಡುವುದಿಲ್ಲ. ನನ್ನನ್ನು ನಂಬಿ."

ಹಾಗಾದರೆ ಕೇಳಿ, ಈ ಹಳ್ಳಿಗೆ ಸಮೀಪದಲ್ಲಿರುವ ಹಂಪಾಪುರ ನನ್ನೂರು. ನನ್ನ ತಂದೆ ಭೀಮಸೇನರಾಯರು ಪೋಲಿಸ್ ಇನ್‌ಸ್ಪೆಕ್ಟರ್ ಆಗಿದ್ದರು. ಅವರ ಡ್ಯೂಟಿ ಕಳ್ಳ ಸಾಗಾಣಿಕೆಯನ್ನು ತಡೆಯುವುದು. ಆಸುಪಾಸಿನ ಕಾಡುಗಳಲ್ಲಿ ಹೇರಳವಾಗಿ ಗಂಧದ ಮರಗಳಿದ್ದವು. ಅಲ್ಲದೆ ಬಗೆಬಗೆಯ ಬೆಲೆ ಬಾಳುವ ಮರಗಳೂ ಇದ್ದವು. ಅದನ್ನು ಕಡಿದು ಕಳ್ಳ ಸಾಗಾಣಿಕೆಯನ್ನು ನಡೆಸುವವರನ್ನು ಹಿಡಿಯಬೇಕಾಗಿತ್ತು. ಆ ಸ್ಮಗ್ಲರ್, ಸಾಗಿಸುತ್ತಿದ್ದ ಟ್ರಕ್ಕೊಂದು ಪೋಲಿಸರ ವಶಕ್ಕೆ ಸಿಕ್ಕಿ ಬಿದ್ದಿತು... ಆಗ ಆ ಸ್ಮಗ್ಲರ್ ತಾನೇ ಖುದ್ದಾಗಿ ನನ್ನ ತಂದೆಯ ಬಳಿಗೆ ಬಂದು, ಲಕ್ಷಾಂತರ ರೂಪಾಯಿಗಳ ಆಮಿಷವನ್ನೊಡ್ಡಿ, ಟ್ರಕ್ಕನ್ನು ಬಿಟ್ಟು ಕೊಡಬೇಕೆಂದು ಕೇಳಿಕೊಂಡಿದ್ದ. ನಿಷ್ಠಾವಂತ

ಅಧಿಕಾರಿಯಾಗಿದ್ದ ನನ್ನ ತಂದೆ ಅವನ ಮಾತುಗಳಿಗೆ ಮರುಳಾಗಲಿಲ್ಲ. ಅವರ ಮೇಲೆ ಕೋಪಗೊಂಡ ಸ್ಮಗ್ಲರ್ ಬೇರೆಯೇ ಆಟವನ್ನು ಹೂಡಿದ.

ನನ್ನ ತಂದೆ ಮನೆಯಲ್ಲಿಲ್ಲದ ಸಮಯದಲ್ಲಿ, ಗಂಧದ ಮರದ ತುಂಡುಗಳನ್ನೂ, ಅಮೂಲ್ಯವಾದ ಗಿಡಮೂಲಿಕೆಗಳ ಕಟ್ಟುಗಳನ್ನು ತಂದು, ನಮ್ಮ ಮನೆಯಲ್ಲಿರಿಸಿದ. ನಂತರ ಈ ವಿಷಯವನ್ನು ತಾನೇ ಭೀಮಸೇನರಾಯರಿಗೆ ತಿಳಿಸಿದ. ಈಗಲಾದರೂ ನಮ್ಮ ಟ್ರಕ್ಕನ್ನು ನಮ್ಮ ವಶಕ್ಕೆ ಕೊಡದಿದ್ದರೆ, ನೀನು ಅಪರಾಧಿಯ ಸ್ಥಾನದಲ್ಲಿ ನಿಲ್ಲುವಂತೆ ಮಾಡುತ್ತೇವೆ ಎಂದು ಬೆದರಿಸಿದ.

ಮನೆಗೆ ಬಂದ ಭೀಮಸೇನರಾಯರು ಗಂಧದ ಕೊರಡುಗಳನ್ನು ಗಿಡಮೂಲಿಕೆಗಳನ್ನು ನೋಡಿ ಚಿಂತೆಗೀಡಾದರು. ತಮ್ಮ ಪ್ರಾಮಾಣಿಕತೆಯ ಮೇಲೆ ಅಭಿಮಾನ ಇಟ್ಟವರು ತನ್ನ ಬಗ್ಗೆ ತಪ್ಪು ತಿಳಿಯದೇ ಇರಲಾರರು ಎಂದು ಖಚಿತವಾಯಿತು. ಈ ಜಾಲದಿಂದ ಹೇಗೆ ಪಾರಾಗಬೇಕೆಂದು ತಿಳಿಯಲಿಲ್ಲ. ಸ್ಮಗ್ಲರ್‌ನ ಹಿಂಸೆ ಹೆಚ್ಚಾಗತೊಡಗಿತು. ಒತ್ತಡವನ್ನು ತಾಳಲಾರದೇ, ಆತ್ಮಹತ್ಯೆ ಒಂದೇ ದಾರಿ ಎಂದು ಯೋಚಿಸಿ, ತಮ್ಮ ಸ್ನೇಹಿತ ಪಶುಪತಿಗೆ ಒಂದು ಪತ್ರವನ್ನು ಬರೆದು, ತನ್ನ ಮಗ ಭಾಸ್ಕರನನ್ನು ತಾವು ನೋಡಿಕೊಳ್ಳಬೇಕೆಂದು ಕೇಳಿಕೊಂಡಿದ್ದರು.

ಗೆಳೆಯರ ಜತೆಯಲ್ಲಿ ಆಟ ಮುಗಿಸಿಕೊಂಡು ಭಾಸ್ಕರ ಮನೆಗೆ ಬಂದ. ತಂದೆ ಜ್ಞಾನವಿಲ್ಲದೇ ಬಿದ್ದುದನ್ನು ಕಂಡು ಗಾಬರಿಯಾಗಿ, ಓಡಿ ಹೋಗಿ ಪಕ್ಕದ ಮನೆಯವರನ್ನು ಕರೆ ತಂದ... ಜೀಪಿನಲ್ಲಿ ಅವರನ್ನೆತ್ತಿಕೊಂಡು ಸಮೀಪದ ಸರ್ಕಾರಿ ಆಸ್ಪತ್ರೆಗೆ ಕರೆದೊಯ್ದರು. ವಿಷವನ್ನು ಸೇವಿಸಿ ಬಹಳ ಹೊತ್ತೇ ಆಗಿದ್ದುದರಿಂದ ಅವರನ್ನು ಉಳಿಸಿರಲಾಗಿರಲಿಲ್ಲ. ಭಾಸ್ಕರ ತಂದೆಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದ.

ಪಶುಪತಿರಾಯರು ತಕ್ಷಣವೇ ಬಂದಿದ್ದರು. ಅಳುತ್ತಿದ್ದ ಭಾಸ್ಕರನನ್ನು ತಬ್ಬಿಕೊಂಡು ಸಮಾಧಾನಗೊಳಿಸಲು ಪ್ರಯತ್ನಿಸಿದರು. ಪೋಲಿಸರಿಗೆ, ಅವರು ಪಶುಪತಿರಾಯರಿಗೆ ಬರೆದಿಟ್ಟಿದ್ದ ಪತ್ರ ಸಿಕ್ಕಿತು. ಪಶುಪತಿರಾಯರು ಎಲ್ಲರ ಎದುರಿಗೆ ಅದನ್ನು ಓದಿದ್ದರು. ಅವರ ಸಾವಿಗೆ ಆ ಸ್ಮಗ್ಲರ್ರೇ ಕಾರಣ ಎಂದು ಖಚಿತವಾಯಿತು. ಪಶುಪತಿರಾಯರು ಭಾಸ್ಕರನನ್ನು ತಮ್ಮ ಮನೆಗೆ ಕರೆದೊಯ್ದರು. ಆ ಮನೆಯನ್ನು ಪೋಲಿಸರು ಬೀಗ ಹಾಕಿ ತಮ್ಮ ವಶಕ್ಕೆ ತೆಗೆದುಕೊಂಡಿದ್ದರು.

ಭಾಸ್ಕರನ ದುಃಖಕ್ಕೆ ಮಿತಿಯೇ ಇರಲಿಲ್ಲ. ತನ್ನ ತಂದೆಯ ಸಾವಿಗೆ ಕಾರಣನಾದ ಆ ಸ್ಮಗ್ಲರ್‌ನ್ನು ಹಿಡಿಯಲೇ ಬೇಕೆಂದು ಪಣ ತೊಟ್ಟು, ಪಶುಪತಿರಾಯರಿಗೆ ತನಗೆ ಸಹಾಯಕರಾಗಬೇಕೆಂದು ಕೇಳಿಕೊಂಡ. ಅವರು ಒಪ್ಪಿ, ಸಮ್ಮತಿಯನ್ನು ಸೂಚಿಸಿದ್ದರು... ಅವನು ಬೆಳೆದು ದೊಡ್ಡವನಾಗುವವರೆಗೂ ಅವನನ್ನು ನೋಡಿಕೊಂಡರು...

"ಬೆಳೆದು ದೊಡ್ಡವನಾಗಿ, ವಿದ್ಯಾಭ್ಯಾಸವನ್ನು ಮಾಡಿ, ಪೋಲಿಸ್ ಪೋರ್ಸ್‌ಗೆ ಸೇರಿಕೊಂಡು, ಅರ್ಹತೆಗಳನ್ನು ಪಡೆದು, ಈಗ ಇನ್‌ಸ್ಪೆಕ್ಟರ್ ಇನ್‌ಛಾರ್ಜ್ ಆಗಿ

ಪಕ್ಕದ ಹಳ್ಳಿಯಲ್ಲಿದೀನಿ... ಈಗ ನನ್ನ ಏಕೈಕ ಗುರಿ ಆ ಸ್ಮಗ್ಲರ್‌ನ್ನು ಹಿಡಿದು ಜೈಲಿಗೆ ಕಳಿಸುವುದು..." ಎನ್ನುತ್ತಾ ಅವಳ ಮುಖದ ಭಾವನೆಗಳನ್ನೇ ಗಮನಿಸಿದ.

ಮೊದಲಿಗೆ ಅವಳ ಮುಖ ಕಪ್ಪಿಟ್ಟಿತು. ಕೆಲವೇ ನಿಮಿಷಗಳಲ್ಲಿ ಸರಿಪಡಿಸಿಕೊಂಡು. ಮುಗುಳ್ನಗಲು ಯತ್ನಿಸಿದಳು, ಸಾಧ್ಯವಾಗಲಿಲ್ಲ. ತಲೆ ತಗ್ಗಿಸಿದಳು.

"ಈಗ ನನ್ನ ಪ್ರಶ್ನೆಗೆ ಉತ್ತರ..." ಎಂದ ಅವಳ ಗಲ್ಲವನ್ನೆತ್ತಿ.

"ನನ್ನ ಗಂಡ ನನಗೆ ಮೊದಲಿನಿಂದಲೂ ದೂರದ ಸಂಬಂಧಿ. ಅವನು ವಯಸ್ಸಿನಲ್ಲಿ ನನಗಿಂತ ವಿಪರೀತ ದೊಡ್ಡವನು... ಶ್ರೀಮಂತನಾಗಿದ್ದು ನಮ್ಮ ತಂದೆಗೆ ಬಹಳಷ್ಟು ಸಾರಿ ಹಣದ ಸಹಾಯ ಮಾಡಿದ್ದವನು. ಅವನ ಋಣವನ್ನು ತೀರಿಸಲಾಗದೇ ನನ್ನ ತಂದೆ ನನ್ನನ್ನು ಈ ಮದುವೆಗೆ ಒಪ್ಪಿಸಿದರು. ಮದುವೆಯ ಹಿಂದಿನ ರಾತ್ರಿ ನಾನು ಓಡಿ ಹೋಗುವ ಪ್ರಯತ್ನವನ್ನು ಮಾಡಿ ವಿಫಲಳಾದೆ.

ಮದುವೆಯ ನಂತರ, ಅವನು ನನ್ನನ್ನು ಇಲ್ಲಿ ತಂದಿರಿಸಿದ. ಅವನು ಎಲ್ಲಿ ತಿರುಗುತ್ತಾನೋ. ಏನು ಮಾಡುತ್ತಾನೋ ನನಗೆ ತಿಳಿಯದು. ನಾನೆಂದೂ ಕೇಳಿಲ್ಲ. ನಿಮಗೆ ಆಶ್ಚರ್ಯವಾಗಬಹುದು. ಅವನು ಇದುವರೆಗೂ ನನ್ನನ್ನು ಮುಟ್ಟಿಲ್ಲ. ಆ ಬಗ್ಗೆ ಕೇಳಿದರೆ, ಹೆಂಗಸು ಬಹಳ ಕೆಟ್ಟ ವಸ್ತು. ಅವಳ ಸಹವಾಸ ಮಾಡಿದರೆ, ಅವನು ಹಾಳಾಗಿ ಹೋಗ್ತಾನೆ. ನನಗೆ ನನ್ನದೇ ಆದ ಕೆಲಸಗಳು ಸಾಕಷ್ಟಿವೆ. ನಿನ್ನ ಸಂಗ ಸುಖವನ್ನು ಅನುಭವಿಸ್ತಾ ನಾನು ಇಲ್ಲಿ ಬಿದ್ದಿರುಲ್ಲ... ನನಗೆ ಮುಖ್ಯವಾದ ಕೆಲವು ಕೆಲಸಗಳಿವೆ. ಅದು ಪೂರೈಸಿದ ನಂತರ ನಾನು ನಿನ್ನನ್ನು ನಿನ್ನ ಅಪ್ಪನ ಮನೆಗೇ ವಾಪಸ್ಸು ಕಳಿಸ್ತೀನಿ. ನಾನು ದುಬೈಗೆ ಹೋಗ್ತೀನಿ ಅಂತ ಸದಾ ಹೇಳ್ತಿರ್‍ತಾನೆ...

"ಮತ್ತೆ ಇಲ್ಲಿಗೆ ಯಾವಾಗ್ಲೂ ಬರೋದೇ ಇಲ್ವಾ!..."

"ಈಗ ತಿಂಗಳಾಯ್ತು ಅವನು ಇಲ್ಲಿಗೆ ಬಂದು, ಅವನ ಕಡೆಯ ಒಂದು ಮುದುಕಿ ನನ್ನ ಜತೇಲಿದೆ. ಅದಕ್ಕೆ ಅದರದ್ದೇ ಚಿಂತೆ... ಅದಕ್ಕೂ ನನ್ನ ಬಗ್ಗೆ ಅನುಕಂಪವಿದೆ..."

"ನೀನ್ಯಾಕೆ ಅವನನ್ನು ಬಿಟ್ಟು ಹೋಗಬಾರದು..."

"ಹಾಗೆ ಹೋದರೂ ಅವನು ಮತ್ತೆ ನನ್ನನ್ನು ಇಲ್ಲಿಗೇ ತಂದು ಕೆಡವುತ್ತಾನೆ. ಅವನಿಗೆ ನನ್ನ ಮೇಲೆ ನಂಬಿಕೆ ಇದೆಯೋ ಇಲ್ಲವೋ ತಿಳಿಯದು. ಆದರೆ ಎಂದೂ ಏನನ್ನೂ ಪ್ರಶ್ನಿಸಲಿಲ್ಲ. ಬಹುಶಃ ಅವನಿಗೆ ನನ್ನ ಬಗ್ಗೆ ಯೋಚಿಸಲು ಸಮಯವೂ ಇರಲಾರದು."

"ಅವನಿಗೆ ಬೇರೆ ಹೆಂಗಸಿನ ಸಹವಾಸವಿರಬಹುದು."

"ಇರಬಹುದು. ನನಗೆ ಏನೂ ವ್ಯಥೆಯಿಲ್ಲ... ಅವನಿಗೆ ನಾನು ಬೇಡ... ಆದರೆ ನಾನು ಬೇರೆ ಯಾರನ್ನು ಮದುವೆಯಾಗುವಂತಿಲ್ಲ. ಇದೊಂದು ಥರ ಮಾನಸಿಕ ಹಿಂಸೆ, ಅವನು ನನಗೆ ಕೊಡುತ್ತಿರುವುದು."

"ಇದರಿಂದ ಪಾರಾಗಬೇಕೆಂದು ನಿಮಗೆ ಅನ್ನಿಸುವುದಿಲ್ವಾ?"

"ಅನ್ನಿಸುತ್ತೆ. ಆದರೆ ಮಾರ್ಗ ಕಾಣುತ್ತಿಲ್ಲ. ನನ್ನ ತಂದೆ ನನ್ನ ಕಡೆಗಿಲ್ಲ. ನನ್ನವರು ಬೇರೆ ಯಾರೂ ಇಲ್ಲ. ನಾನೇನು ಮಾಡಲಿ?"

"ನಾನು ಇದೀನಲ್ಲ. ನನ್ನನ್ನು ನಿಮ್ಮವನಂತೇ ಅಂತ ತಿಳಿಯಿರಿ. ನಾನು ನಿಮಗೆ ಸಹಾಯ ಮಾಡ್ತೀನಿ. ನೀವು ಇಲ್ಲಿಂದ ಹೊರಟು ಹೋಗಿ."

"ಅವನು ನನ್ನನ್ನು ಕೊಲ್ಲಿಸುತ್ತಾನೆ. ನಿಮ್ಮನ್ನು ಕೊಲ್ಲಿಸಬಹುದು."

"ನನಗೆ ಆ ಭಯವಿಲ್ಲ. ನಿಮ್ಮನ್ನು ನಾನು ಪ್ರೀತಿಸುತ್ತಿದೀನಿ. ನಿಮ್ಮನ್ನು ರಕ್ಷಿಸುವ ಜವಾಬ್ದಾರಿ ನನಗಿರಲಿ... ನಿಮಗೆ ಯಾವ ಭಯವೂ ಬೇಡ."

"ಓಹ್ ಭಾಸ್ಕರ್.... ನೀನೆಷ್ಟು ಒಳ್ಳೆಯವರು... ಇದುವರೆಗೂ ಯಾರೂ ನನಗೆ ಇಂಥ ಮಾತುಗಳನ್ನು ಹೇಳಿರಲಿಲ್ಲ. ನೀವು ಪ್ರೀತಿಸ್ತಿದೀನಿ ಅಂತ ಹೇಳಿದ್ರಿ. ನಿಮ್ಮ ಈ ಪ್ರೀತಿಗೆ ಅರ್ಹಳು ಹೌದೋ ಅಲ್ಲವೋ.. ನಾನು ಒಂದು ಮುಖ್ಯವಾದ ವಿಷಯವನ್ನು ನಿಮಗೆ ತಿಳಿಸಲೇ ಇಲ್ಲ... ತಿಳಿಸಲು ಭಯವಾಗುತ್ತೆ...

"ನಿನ್ನ ಗಂಡ ಮಹಾದೇವಯ್ಯ.. ಅಂತ ನನಗೆ ಗೊತ್ತು..."

"ನಿಮಗೆ ಹೇಗೆ ಗೊತ್ತಾಯ್ತು?..."

"ಅವನೇ ಆ ಸ್ಮಗ್ಲರ್... ಅವನನ್ನು ಹುಡುಕಿಕೊಂಡೇ ನಾನು ಈ ಹಳ್ಳಿಗೆ ಬಂದಿದ್ದು... ಅವನನ್ನು ಹಿಡಿಯುವುದಕ್ಕೆ ನೀವು ನನಗೆ ಸಹಾಯವನ್ನು ಮಾಡಬೇಕು... ನಿಮಗೆ ಇಷ್ಟವಿದ್ದರೆ... ನನ್ನ ಮೇಲೆ ನಂಬಿಕೆ ಇದ್ದರೆ...

"ನನಗೆ ನಿಮ್ಮ ಮೇಲೆ ನಂಬಿಕೆ ಇದೆ... ಆದರೆ ಭಯವೂ ಆಗುತ್ತೆ..."

"ಇನ್ನು ಮುಂದೆ ನಿಮಗೆ ಯಾವ ಭಯವೂ ಬೇಡ ಅಂತ ಹೇಳಿದ್ನಲ್ಲ. ಇನ್ನು ನೀವು ಮನೆಗೆ ಹೋಗಿ. ನಮ್ಮನ್ನು ಯಾರಾದರೂ ಗಮನಿಸುತ್ತಿರಬಹುದು.."

"ನಿಮ್ಮನ್ನು ಬಿಟ್ಟು ಹೋಗಲು ನನ್ನ ಮನಸ್ಸು ಒಪ್ಪುತ್ತಿಲ್ಲ. ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿ..."

"ನಿಮ್ಮ ಗಂಡನಿಗೆ ತಿಳಿದರೆ, ಕೆಲಸ ಕೆಡುತ್ತದೆ... ಮೊದಲು ಅವನು ಜೈಲಿಗೆ ಹೋಗಲಿ... ಆಮೇಲೆ ನಮ್ಮಿಬ್ಬರ ಮದುವೆ..."

"ನನ್ನ ಗಂಡ ಅಷ್ಟು ಸುಲಭದಲ್ಲಿ ಸಿಕ್ಕಿ ಬೀಳುವವನಲ್ಲ.... ಅಲ್ಲಿಯವರೆಗೂ ನಾನು ಒಂಟಿಯಾಗಿರಬೇಕಾ?"

"ಇದುವರೆಗೂ ಒಂಟಿಯಾಗಿಯೇ ಇದ್ದರಲ್ಲ..."

"ನಿಮ್ಮನ್ನು ಕಂಡ ಮೇಲೆ ನನ್ನ ಆಸೆಗಳು ಗರಿಗೆದರಿ ಕುಣಿಯುತ್ತಿವೆ... ನನಗೆ ನಿಮ್ಮ ಸಹವಾಸಬೇಕೆನ್ನಿಸುತ್ತಿದೆ..."

"ಇದು ತಪ್ಪು ಪ್ರಿಯಾ... ಈಗ ನಿಮ್ಮ ಮನಸ್ಥಿತಿ ಸರಿಯಾಗಿಲ್ಲ... ಇನ್ನು ನೀವು ಇಲ್ಲೇ ಇದ್ದರೆ ಅನಾಹುತ ನಡೆಯುವುದರಲ್ಲಿ ಸಂಶಯವಿಲ್ಲ..." ಅವನು ಅವಳನ್ನು ಎಬ್ಬಿಸಲೆಂದು ಹತ್ತಿರ ಬಂದ. ಕೂತಿದ್ದವಳು ಹಾಗೇ ಅವನನ್ನು ತಬ್ಬಿಕೊಂಡಳು.

"ಪ್ಲೀಸ್, ನನ್ನನ್ನು ದೂರ ಸರಿಸಬೇಡಿ... ನಿರಾಶೆಗೊಂಡ ನಾನು ಏನಾದರೂ ಮಾಡಿಕೊಂಡರೆ ಆ ತಪ್ಪು ನಿಮ್ಮದಾಗುತ್ತದೆ. ನಾನು ಹಸಿದಿರುವ ಹೆಣ್ಣು... ನೀವು ನನಗೆ ಸುಖವನ್ನು ಕೊಡದಿದ್ದರೆ. ನಾನು ಆತ್ಮಹತ್ಯೆ ಮಾಡಿಕೊಳ್ತೀನಿ" ಬೆದರಿಸಿದಳು.

"ಪ್ರಿಯಾ. ನೀವು ಭಂಡರು. ನಾನು ಗಂಡಸು. ನನಗೂ ದಾಹಗಳಿವೆ. ನೀವಾಗಿಯೇ ನನ್ನನ್ನು ಆಹ್ವಾನಿಸುತ್ತಿರುವಾಗ ತಿರಸ್ಕರಿಸುವಷ್ಟು ಮೂರ್ಖ ನಾನಲ್ಲ. ಆದರೆ ಆತುರ ಪಡುವುದು ಬೇಡ ಅಂತ ಹೇಳಿದೆ. ನಿಮಗೆ ಕೇಳಿಸಿಕೊಳ್ಳುವ ಸಹನೆ ಇಲ್ಲ.. ನಿಮ್ಮ ಅತೃಪ್ತ ಮನಸ್ಸು ಸಂಗ ಸುಖವನ್ನು ಬಯಸಿದೆ... ನೀವು ಈ ಹಿಂದೆಂದೂ ಅನುಭವಿಸದ ಸುಖವನ್ನು ನಾನು ನಿಮಗೆ ಉಣಿಸುತ್ತೇನೆ ಬನ್ನಿ..." ಎಂದು ಹೇಳಿ ಮುಂಬಾಗಿಲನ್ನು ಭದ್ರಪಡಿಸಿ. ಅವಳನ್ನು ತನ್ನ ರೂಮಿಗೆ ಎತ್ತಿಕೊಂಡು ಹೋದ.

ಅವಳ ದಾಹ ತೀರಿತು. ಅವನ ಬ್ರಹ್ಮಚರ್ಯ ಕೊನೆಗೊಂಡಿತು. ಹೊಚ್ಚ ಹೊಸದಾದ ಅನುಭವಗಳಲ್ಲಿ ಇಬ್ಬರೂ ಮುಳುಗಿದರು. ಹೊತ್ತು ಸರಿದುದೇ ತಿಳಿಯದಂತೆ ಇಬ್ಬರೂ ಮೈಮರೆತಿದ್ದರು. ಮೊದಲಿಗೆ ಇಚ್ಚೆತ್ತ ಭಾಸ್ಕರ ಮಗ್ಗುಲಲ್ಲಿ ಮಲಗಿದ್ದವಳನ್ನು ಎಬ್ಬಿಸಿದ.

"ನಿಮ್ಮಾಸೆ ತೀರಿದೆ. ನನ್ನ ವ್ರತ ಮುರಿದಿದೆ. ನೀವು ಈಗಲಾದರೂ ಹೋಗಬಹುದಲ್ಲ. ಇಲ್ಲೇ ಇದ್ದರೆ ಬೇರೆಯವರಿಗೆ ಅನುಮಾನ ಬರುವುದು ಖಂಡಿತಾ."

ಮನಸ್ಸಿಲ್ಲದೇ ಪ್ರಿಯಾ ಎದ್ದಳು. "ಥ್ಯಾಂಕ್ಸ್ ಭಾಸ್ಕರ್... ನನ್ನ ಹಠವೇ ಗೆದ್ದಿತು. ನಿಮಗೆ ಬೇಸರವೇನಿಲ್ಲ ತಾನೇ...?

"ಬೇಸರ ಏಕೆ?.. ಇದೊಂದು ಅಪೂರ್ವ ಗಳಿಗೆ. ಅನಿರೀಕ್ಷಿತವಲ್ಲದಿದ್ದರೂ ಅಪೇಕ್ಷಣೀಯವಾಗಿತ್ತು. ನಾನು ಇಲ್ಲಿ ಇರುವವರೆಗೆ. ನಿಮಗೆ ನಾನು ಬೇಕೆನಿಸಿದಾಗ ಬರಬಹುದು. ಆದರೆ ಒಂದು ಮಿತಿ ಇರಲಿ. ಯಾರಿಗೂ ತಿಳಿಯದಿದ್ದರೆ ಒಳ್ಳೆಯದು."

"ನೀವು ಹೇಳಿದ್ದು ನೆನಪಿನಲ್ಲಿರುತ್ತೆ. ಇಂದಿನಿಂದ ನಾನು ನಿಮ್ಮವಳು. ನೀವು ನನಗೆ ದ್ರೋಹ ಮಾಡಬಾರದು. ಆದಷ್ಟು ಬೇಗ ನನ್ನನ್ನು ಈ ಕೂಪದಿಂದ ಕರೆದೊಯ್ಯಬೇಕು.." ಅವನ ಕತ್ತಿಗೆ ಜೋತು ಬಿದ್ದಳು.

"ಅವನು ಅವಳ ಹಿಡಿತವನ್ನು ಬಿಡಿಸಿಕೊಂಡ. ಈಗ ನಿಮ್ಮ ಸಹಕಾರ ನನಗೆ ಅತ್ಯಗತ್ಯ. ಅವನು ಯಾರಿಗೂ ತಿಳಿಯದಂತೆ ನಿಮ್ಮನ್ನು ಇಲ್ಲಿ ಇಟ್ಟಿದ್ದಾನೆ. ಹಾಗೆಯೇ ಅವನ ಅವ್ಯವಹಾರಗಳನ್ನು ಕುರಿತು ಮಾಹಿತಿ ನೀಡಬಲ್ಲ. ಪತ್ರಗಳು, ಡೈರಿಗಳು, ಫೈಲು ಯಾವುದಾದರೂ ನಿಮ್ಮ ಮನೆಯಲ್ಲಿರಬಹುದು... ಅದನ್ನು ನೀವು ಹುಡುಕಿ ನನಗೆ ಕೊಟ್ಟರೆ, ನನಗೆ ಅನುಕೂಲವಾಗುತ್ತದೆ."

"ನೀವೇ ಬಂದು ಹುಡುಕಬಹುದಲ್ಲ."

"ಹಾಗೆ ಮಾಡಿದರೆ ಅದು ತಪ್ಪಾಗುತ್ತದೆ. ಅಲ್ಲದೇ ನನಗೆ ಆ ಅಧಿಕಾರವಿಲ್ಲ. ನೀವಾದರೆ ಅವನ ಹೆಂಡತಿ.. ನೀವು ಏನನ್ನು ಬೇಕಾದರೂ ಹುಡುಕಬಹುದು."

"ಅಷ್ಟು ಸುಲಭವಾಗಿ ಸಿಗುವಂತೆ ಇಟ್ಟಿರುತ್ತಾನೆ ಅಂತ ಅಂದ್ಕೊಂಡಿದ್ದೀರಾ?"

"ಇರಬಹುದು. ಇರದೇನೂ ಇರಬಹುದು. ಹುಡುಕಿ ನೋಡಿ. ಒಂದೇ ಒಂದು ಕ್ಲೂ ಸಿಕ್ಕರೂ. ನಾನು ಅದರ ಉಪಯೋಗವನ್ನು ಪಡೆದುಕೊಳ್ತೀನಿ."

* * *

ಮಾರನೇ ದಿನವೇ ಪ್ರಿಯಾ ಕೆಲವು ಹಾಳೆಗಳನ್ನು ಹಿಡಿದುಕೊಂಡು ಬಂದಳು. "ಇದರಲ್ಲಿ ಏನೋ ಬರೆದಿದೆ. ಬಹುಶಃ ತಮಿಳು ಭಾಷೆ ಇರಬಹುದು. ನನಗೆ ಅರ್ಥವಾಗಲಿಲ್ಲ. ನಿಮಗೆ ಗೊತ್ತಾಗಬಹುದು ಅಂತ ತಂದೆ.."

"ಥ್ಯಾಂಕ್ಸ್ ಪ್ರಿಯಾ... ತಮಿಳು ಗೊತ್ತಿರೋರ ಹತ್ರ ಓದಿಸಿ ತಿಳ್ಕೋಬೇಕು.."

"ಹಾಗೇ ಇನ್ನೊಂದು ವಿಷಯ"

"ಅದೇನದು ಹೇಳು"

"ಹೇಳಿದ್ರೆ ಏನು ಕೊಡ್ತೀರಿ?"

"ಹಾಗಾದ್ರೆ ಈಗ ಮೊದಲು ನಿಮ್ಮ ಬೆಡ್‌ರೂಂಗೆ ಹೋಗೋಣ. ಆಮೇಲೆ.. ಆಮೇಲೆ ಮಾತಾಡೋಣ."

"ಇದು ಅತಿಯಾಯ್ತು. ಇದಕ್ಕೋಸ್ಕರ ಬಂದಂತಿದೆ."

"ನೀವೊಬ್ರೇ ಇದ್ರಲ್ಲ. ನಿಮ್ಮ ಬೇಜಾರು ಕಳೆಯಲಿ ಅಂತ ಬಂದೆ. ನಿಮಗೆ ಬೇಡವಾದ್ರೆ ನಾನೇಕೆ ಬಲವಂತ ಮಾಡಲಿ?" ಅವಳು ವಯ್ಯಾರದಿಂದ ನುಡಿದಾಗ, ಅವನು ಅವಳ ಸೊಂಟವನ್ನು ಚಿವುಟಿದ.

"ಹೆಂಗಸರೇ ಹೀಗೆ... ಮಾತಾಡಿ. ಮರುಳು ಮಾಡಿ ತಮ್ಮ ಆಸೆಯನ್ನು ತೀರಿಸಿ ಕೋಳ್ತಾರೆ. ಬಡಪಾಯಿ ಬ್ರಹ್ಮಚಾರಿಯ ಗತಿ ಏನಾಗಿ ಹೋಯ್ತು... ಹುಂ... ನಡೀರಿ..." ಎನ್ನುತ್ತಾ ಅವಳನ್ನು ಬೆಡ್‌ರೂಂಗೆ ಕರೆದೊಯ್ದ.

ಕಣ್ಣು ಮುಚ್ಚಿ ಸುಖದ ಅಮಲಿನಲ್ಲೇ ಮಲಗಿದ್ದವಳನ್ನು ಅವನು ಎಚ್ಚಿಸಿದ. ಇನ್ನೇನೋ ಹೇಳ್ತೀನಿ ಅಂತ ಅಂದ್ಯಲ್ಲಾ. ಅದೇನು ಬೇಗ ಹೇಳು.

"ಆಮೇಲೆ ಹೇಳ್ತೀನಿ. ನನ್ನನ್ನು ಡಿಸ್ಟರ್ಬ್ ಮಾಡ್ಬೇಡಿ."

ಅವನು ಕಚಗುಳಿ ಇಟ್ಟು ಎಚ್ಚಿಸಿದ. "ಪ್ಲೀಸ್ ನನ್ನನ್ನು ಸತಾಯಿಸಬೇಡ. ನೀನು ಕೇಳಿದ್ದನ್ನು ಕೊಟ್ಟಿದ್ದೇನೆ. ಏನದು ಹೇಳು."

"ಏನದು?" ಎನ್ನುತ್ತಾ ಯೋಚಿಸುವವಳಂತೆ ತಲೆ ಕೆರೆದುಕೊಂಡು ಎದ್ದಳು. ಕಪಾಲಕ್ಕೆ ಬಾರಿಸುವಷ್ಟು ಕೋಪ ಬಂದರೂ ತಡೆದುಕೊಂಡ.

"ನಮ್ಮ ರೂಮಿನ ಪಕ್ಕ ಒಂದು ಕತ್ತಲೆ ಕೋಣೆ ಇದೆ. ಅಲ್ಲಿ ನೆಲಮಾಳಿಗೆಗೆ ಇಳಿದು ಹೋಗಲು ಮೆಟ್ಟಿಲುಗಳಿವೆ."

"ಅಲ್ಲೇನಿದೆ ಅಂತ ನೀನು ನೋಡಿಲ್ವಾ?"

"ಇಲ್ಲ ಇಳಿಗು ಹೋಗಲು ನಂಗೆ ಭಯ ಆಯ್ತು. ಅಲ್ಲಿ ಹಾವು ಚೇಳುಗಳು ಇದ್ದರೆ."

"ಇದುವರೆಗೂ ನೀನೆಂದೂ ನೋಡಿರಲಿಲ್ವಾ?"

"ಇಲ್ಲ, ನಿನಗೋಸ್ಕರ ಮನೆಯಲ್ಲಿ ಶೋಧನೆ ಮಾಡುವಾಗ ಆ ರೂಮಿಗೆ ಹೋದೆ."

"ಹುಂ. ನೆಲಮಾಳಿಗೆ ಇದೆ. ಅಂದರೆ ಅಲ್ಲಿ ಏನೋ ಇರಲೇ ಬೇಕು. ನೀನು ಈ ವಿಷಯವನ್ನು ಬೇರೆ ಯಾರಿಗೂ ಹೇಳಬೇಡ. ಈ ಹಿಂದೆ ನಿನ್ನ ಗಂಡ ಬಂದಾಗ ಆ ರೂಮಿಗೆ ಏನಾದ್ರೂ ಹೋಗಿದ್ನಾ? ನೆನಪಿದೆಯಾ?"

"ಹುಂ. ತಿಂಗಳ ಕೆಳಗೆ ಬಂದಾಗ ಅವನ ಜೊತೆಯಲ್ಲಿ ಇನ್ನು ಇಬ್ಬರು ಇದ್ದರು. ತಮಿಳಿನಲ್ಲಿ ಮಾತನಾಡುತ್ತಿದ್ರು. ಆ ರೂಮಿನೊಳಗೆ ಹೋಗಿ ಬಾಗಿಲನ್ನು ಹಾಕಿಕೊಂಡ್ರು. ಆ ರೂಮಿಗೆ ಬೀಗ ಹಾಕಿಲ್ಲ. ಅದೇ ಆಶ್ಚರ್ಯ.

"ಬೀಗ ಹಾಕಿದ್ರೆ ನಿಂಗೆ ಅನುಮಾನ ಬರುತ್ತೆ ಅಂತ ಹಾಕಿಲ್ಲ. ನೀನು ನೆಲ ಮಾಳಿಗಗೆ ಇಳಿದು ಹೋಗಲ್ಲ ಅಂತ ಅವನಿಗೆ ಧೈರ್ಯ. ಅಲ್ಲದೇ ಅಲ್ಲಿ ಏನೂ ಇಲ್ಲದೇನೂ ಇರಬಹುದು."

"ಹಾಗಾದ್ರೆ ನಾನು ನೋಡಿದ್ದು, ಹೇಳಿದ್ದು ಎಲ್ಲಾ ವ್ಯರ್ಥಾನಾ?"

"ಹಾಗೇನಿಲ್ಲ ಪ್ರಿಯಾ... ನಿನ್ನ ಹೇಳಿಕೆ ಖಂಡಿತಾ ಉಪಯೋಗಕ್ಕೆ ಬರುತ್ತೆ. ಈ ಸಾರಿ, ನಿನ್ನ ಗಂಡ ಊರಿಗೆ ಬಂದಾಗ ನೀನು ಅವನನ್ನು ಒಪ್ಪಿಸಿ, ನಿನ್ನ ತವರು ಮನೆಗೆ ಹೋಗು. ಅಪ್ಪಂಗೋ ಅಮ್ಮಂಗೋ ಹುಶಾರಿಲ್ಲ ಅಂತ ಹೇಳು ನಂಬ್ತಾನೆ..."

"ಅದರಿಂದ ನಿಮಗೇನು ಉಪಯೋಗ?"

"ಅದು ಆಮೇಲೆ ಗೊತ್ತಾಗುತ್ತೆ. ಸಧ್ಯಕ್ಕೆ ನಿನ್ನ ಗಂಡ ಬರುವ ಪ್ಲಾನ್ ಇಲ್ಲ ತಾನೇ? ಬಂದರೆ ಎಷ್ಟು ದಿನ ಇರ್ತಾನೆ?"

"ಒಂದು ದಿನ ಅಥವಾ ಒಂದೂವರೆ ದಿನ. ಮುಂದಿನವಾರ ಬರಬಹುದು. ಹಾಗಂತ ಫೋನು ಮಾಡಿದ್ದ."

"ಫೋನು ಬೇರೆ ಇದೆಯಾ ನಿಮ್ಮ ಮನೇಲಿ..."

"ಹುಂ, ಇದೆ. ನಾನು ಮಾಡುವಂತಿಲ್ಲ. ಅವನೇ ಮಾಡ್ತಾನೆ. ಅದೂ ಏನಾದ್ರು ಹೇಳೋದಿದ್ರೆ ಮಾತ್ರ."

"ಮತ್ತೆ ಫೋನು ಮಾಡಿದರೆ, ಎಂದಿನಂತೆ ನಾರ್ಮಲ್ ಆಗಿ ಮಾತನಾಡು. ಅವನಿಗೆ ಅನುಮಾನ ಬಂದರೆ ತಪ್ಪಿಸಿಕೊಂಡು ಹೋಗಬಹುದು. ಇವತ್ತು ರಾತ್ರಿ ಹಿಂಬಾಗಿಲನ್ನು ತೆರೆದಿಟ್ಟು ಮಲಕ್ಕೊ. ಆ ಮುದುಕಿ ಎಲ್ಲಿ ಮಲಗುತ್ತೆ?"

"ನೀವು ನನ್ನ ಮನೆಗೆ ಬರ್ತೀರಾ?"

"ಇಲ್ಲ. ನಾನು ಬರುಲ್ಲ... ನನ್ನ ಅಸಿಸ್ಟೆಂಟ್ ಫೋಟೋಗ್ರಾಫರ್‌ನ ಕಳಿಸ್ತೀನಿ. ಅವನು ನೆಲಮಾಳಿಗೆಯಲ್ಲಿ ಇಳಿದು ಕೆಲವು ಫೋಟೋ ತೆಗೀತಾನೆ. ನೀನು ಯಾವ ಗಲಾಟೆಯನ್ನು ಮಾಡಬಾರದು."

"ಅವನು ನನಗೇನಾದ್ರೂ ಮಾಡಿದ್ರೆ.."

"ಅವನು ಅಂಥೋನಲ್ಲ. ನೀನು ಅವನ ತಂಟೆಗೆ ಹೋಗ್ಬೇಡ ಅಷ್ಟೇ..."

"ನಾನು ಇಲ್ಲಿಗೆ ಬಂದು ಬಿಡ್ಲಾ?"

"ಹೂಂ... ಹಾಗೇ ಆ ಮುದುಕೀನೂ ಕರ್ಕೊಂಡು ಬಾ... ಇನ್ನೊಂದು ವಿಷಯ ಪ್ರಿಯಾ ನಿನ್ನ ಗಂಡ ದಡ್ಡನಲ್ಲ. ನಿನ್ನ ಕಾವಲಿಗೆ ನಿನಗೆ ತಿಳಿಯದಂತೆ ಯಾರನ್ನಾದರೂ ಇಟ್ಟಿರಬಹುದು. ಈಗಾಗ್ಲೇ ನಮ್ಮಿಬ್ಬರ ಸ್ನೇಹ ಅವನಿಗೆ ತಿಳಿದಿರಲೂಬಹುದು."

"ಹಾಗಾದ್ರೆ ನಮ್ಮ ಗತಿ?"

"ನಾನು ನನ್ನ ಮನೆಯನ್ನು ಖಾಲಿ ಮಾಡಿ ವಾಪಸ್ಸು ಹೊರಟು ಹೋಗ್ತೀನಿ. ಆಮೇಲೆ ನಿನ್ನ ಗಂಡ ಬಂದ ಮೇಲೆ ನೀನೂ ನಿನ್ನ ತಂದೆಯ ಮನೆಗೆ ಹೊರಟು ಹೋಗು. ಆಮೇಲೆ ನಾನೇ ನಿನ್ನ ಮನೆಗೆ ಬರ್ತೀನಿ."

"ನಿಜವಾಗಿಯೂ"

"ಹೂಂ.. ನನಗೋಸ್ಕರ ಸಹನೆಯಿಂದ ಕಾಯಬೇಕು. ನಿನ್ನ ತಂದೆಗೆ ನಮ್ಮ ಬಗ್ಗೆ ಹೇಳಬಾರದು."

"ನನಗೆ ಭಯ ಆಗುತ್ತೆ ಭಾಸ್ಕರ್" ಎಂದು ಅವನನ್ನು ತಬ್ಬಿಕೊಂಡಳು.

"ನಿಮಿಷಕ್ಕೊಂದು ಸಲ ತಬ್ಬಿಕೊಂಡರೆ ಬೇರೇನೂ ಸಾಧ್ಯವಾಗಲ್ಲ" ಎನ್ನುತ್ತಾ ಅವಳನ್ನು ದೂರ ಸರಿಸಿದ. ಈಗ ನೀನು ಹೋಗು. ನಾನೇ ಮತ್ತೆ ಹೇಳುವವರೆಗೂ ನೀನು ನಮ್ಮ ಮನೆಯ ಕಡೆ ಬರಬಾರದು. ಏನಾದರೂ ಅರ್ಜೆಂಟ್ ಇದ್ದರೆ ನಾನು ಫೋನು ಮಾಡ್ತೀನಿ. ಫೋನು ನಂಬರ್ರು ಕೊಡು."

"ನಂಬರ್ರು?" ಆ ಫೋನಿಗೆ ನಂಬರ್ರೇ ಇಲ್ಲ. ಎಲ್ಲೂ ಬರೆದಿಲ್ಲ"

"ಸರಿ ಬಿಡು" ಅವಳನ್ನು ಅತ್ತ ಕಳಿಸಿ, ಇವನು ಆ ಪೇಪರ್ರುಗಳ ಮೇಲೆ ಕಣ್ಣು ಹಾಯಿಸಿದ. ಕೆಲವು ಕಡೆ ಇಂಗ್ಲೀಷ್‌ನಲ್ಲಿ ನರೇಶ್ ಅಂತ ಬರೆದಿತ್ತು. ಈ ನರೇಶ್ ಯಾರು ಅಂತ ಯೋಚಿಸುವಾಗ. ತಂದೆಯ ಜತೆಯಲ್ಲಿ ಕಾನ್‌ಸ್ಟೇಬಲ್ ಆಗಿದ್ದ ನರೇಶ್ ಅನ್ನುವ ವ್ಯಕ್ತಿಯ ನೆನಪಾಯಿತು. ಇಬ್ಬರೂ ಒಬ್ಬರೇ ಇರಬಹುದೇ ಎಂದು ಕೊಂಡು, ತಕ್ಷಣವೇ ಬೈಕ್ ಹತ್ತಿ ತಾನು ಇದ್ದ ಪೋಲೀಸ್ ಸ್ಟೇಷನ್‌ಗೆ ಬಂದ.

ಹಳೆಯ ಫೈಲುಗಳನ್ನು ತೆಗೆಸಿ ಹುಡುಕುವಾಗ, ನರೇಶ ಅಲ್ಲಿ ಕೆಲಸದಲ್ಲಿದ್ದ ಎಂದು ತಿಳಿಯಿತು. ವಿಚಾರಿಸಿದಾಗ, ಅವನು ರಿಟೈರ್ ಆಗಿ, ಬೇರೊಂದು ಊರಿನಲ್ಲಿ ಕೆಲಸ ದಲ್ಲಿದ್ದಾನೆಂದು ತಿಳಿಯಿತು. ಅವನ ವಿಳಾಸವನ್ನು ತೆಗೆದುಕೊಂಡು ಅಲ್ಲಿಗೆ ಹೊರಟ.

* * *

ಹೆಚ್ಚು ಕಡಿಮೆ ತನ್ನ ತಂದೆಯ ವಯಸ್ಸಾಗಿದ್ದ ನರೇಶ, ಇವನನ್ನು ಗುರುತಿಸಲಿಲ್ಲ. ಇವನೇ ತನ್ನ ಪರಿಚಯವನ್ನು ಹೇಳಿಕೊಂಡಾಗ ಅವನ ಮುಖ ಕಪ್ಪಾಯಿತು. "ಏನಪ್ಪಾ ಹೇಗಿದೀಯಾ?" ತೊದಲುತ್ತಾ ವಿಚಾರಿಸಿದ.

"ಚೆನ್ನಾಗಿದೀನಿ. ನಾನೀಗ ದೊಡ್ಡ ಹುದ್ದೆಯಲ್ಲಿದೀನಿ. ಭಾರಿ ಬೇಟೆಯನ್ನು ಹಿಡಿಯುವ ಪ್ರಯತ್ನದಲ್ಲಿದೀನಿ. ನಿನ್ನಿಂದ ನನಗೆ ಸಹಾಯವಾಗಬೇಕು. ಸ್ಮಗ್ಲರ್ ಮಹಾದೇವಯ್ಯ ನಿನಗೆ ಗೊತ್ತಿರಬೇಕಲ್ಲವೆ?"

"ಇಲ್ಲ, ನಂಗೆ ಗೊತ್ತಿಲ್ಲ" ಕಣ್ಣು ತಪ್ಪಿಸಿ ನುಡಿದ.

"ಸುಳ್ಳು ಹೇಳ್ಬೇಡ ನರೇಶ. ಅವನ ಡೈರಿ ನನಗೆ ಸಿಕ್ಕಿದೆ. ಅದರಲ್ಲಿ ನಿನ್ನ ಹೆಸರೂ ಇದೆ. ನೀನು ಅವನಿಗೆ ಸಹಾಯಕನಾಗಿದ್ದೆ. ನನ್ನ ತಂದೆಯ ಸಾವಿಗೆ ನೀನೂ ಕಾರಣನಾಗಿದೀಯ. ನಿಜ ಹೇಳು, ಇಲ್ಲದಿದ್ರೆ, ಈ ವಯಸ್ನಲ್ಲಿ ಜೀವಮಾನವೆಲ್ಲಾ ನೀನು ಜೈಲಿನಲ್ಲಿ ಕೊಳೆಯ ಬೇಕಾಗುತ್ತೆ."

"ದಯವಿಟ್ಟು ನನ್ನನ್ನು ಬಿಟ್ಟು ಬಿಡು. ನಂಗೆ ಏನೂ ತಿಳೀದು."

"ಈಗ ಮಹಾದೇವಯ್ಯ ಎಲ್ಲಿ ಸಿಗ್ತಾನೆ ನಂಗೆ ಹೇಳು. ಮುಂದಿನದನ್ನು ನಾನು ನೋಡಿಕೊಳ್ತೀನಿ."

"ನಂಗೆ ಖಂಡಿತಾ ಗೊತ್ತಿಲ್ಲ."

"ನೀವೆಲ್ಲಾ ಕಳ್ಳರು. ಒಬ್ಬರನ್ನೊಬ್ಬರು ಎಂದಿಗೂ ಮರೆಯುಲ್ಲ. ನಂಗೆ ಗೊತ್ತು, ನಿನ್ನ ಅವನ ನೆಂಟಸ್ತಿಕೆ ಇನ್ನು ಇದೆ. ಎಲ್ಲಿದಾನೆ ಅಂತ ಹೇಳ್ತೀಯೋ..."

"ಎಲ್ಲೆಲ್ಲೋ ತಿರುಗ್ತಿರ್ತಾನೆ. ಅವನ ದಂಧೆ ಹೆಚ್ಚಾಗಿದೆ. ಎಲ್ಲೀಂತ ಹೇಳ್ಲಿ?"

"ನಿಂಗೆ ಗೊತ್ತಿರುವ ಸ್ಥಳಗಳನ್ನೆಲ್ಲ ಹೇಳು. ಅವನನ್ನು ಹಿಡಿಯುವ ಕೆಲಸ ನನ್ನದು. ನಾನು ನಿನಗೆ ಬಹುಮಾನವನ್ನು ಕೊಡಿಸ್ತೀನಿ."

"ನಂಗೆ ಯಾವ ಹಣವೂ ಬೇಡ."

"ಅವನೇ ಸಾಕಷ್ಟು ಈಗಲೂ ಕೊಡ್ತಿದಾನೆ ಅಲ್ವಾ? ನೀನೂ ತಪ್ಪಿತಸ್ಥನೇ. ಆದರೂ, ನೀನು ನನಗೆ ಸಹಾಯ ಮಾಡಿದರೆ, ನಾನು ಜೈಲು ಶಿಕ್ಷೆಯನ್ನು ಕಡಿಮೆ ಮಾಡಿಸ್ತೀನಿ."

"ನನ್ನನ್ನು ಬಿಟ್ಟು ಬಿಡುವುದಾದರೆ, ಎಲ್ಲ ಹೇಳ್ತೀನಿ. ಇಲ್ಲಿಗೆ ಐವತ್ತು ಕಿಲೋ ಮೀಟರ್ ದೂರದಲ್ಲಿ ಒಂದು ಹಳ್ಳಿ ಇದೆ. ಅಲ್ಲಿ ಒಂದು ಮನೆ ಮಾಡಿದಾನೆ. ಆ

ಮನೆಗೆ ಆಗ ಈಗ ಬರ್ತಾನೆ. ಅಲ್ಲಿ ಒಂದು ನೆಲಮಾಳಿಗೆ ಇದೆ. ಅಲ್ಲಿ ಕಳ್ಳ ಸಾಗಾಣಿಕೆಯ ಅನೇಕ ಮಾಲುಗಳಿವೆ. ಕದ್ದಿರುವ ದೇವತಾ ವಿಗ್ರಹಗಳು, ಗಂಧದ, ದಂತದ ಪ್ರತಿಮೆಗಳು, ಬೆಳ್ಳಿಯ, ಚಿನ್ನದ, ಪುರಾತನ ಕಾಲದ ನಾಣ್ಯಗಳು. ಕೆಲವು ವಿಚಿತ್ರ ಔಷಧಗಳು. ಅವುಗಳ ಪಟ್ಟಿಯೇ ಇದೆ. ವಿವರಗಳೂ ಇವೆ. ಅವುಗಳಿಗೆ ಬೆಲೆ ಬಂದಾಗ, ಏಜೆಂಟರು ಬರುತ್ತಾರೆ."

"ಆ ಮನೆಯಲ್ಲಿ ಯಾರು ಇದಾರೆ? ನಿನ್ನ ಹತ್ರ ಆ ವಿವರಗಳ ಕಾಪಿ ಇದೆಯಾ?"

"ಅಲ್ಲಿ ಅವನು ಯಾರೋ ಒಬ್ಬ ಹುಡುಗಿಯನ್ನು ಇಟ್ಟುಕೊಂಡಿದಾನಂತೆ. ಅವಳ ಕಾವಲಿಗೆ ಒಬ್ಬಳು ಹೆಂಗಸು ಇದಾಳೆ. ಅವನ ಕಡೆಯ ಕೆಲವರು ಅಲ್ಲೇ ಯಾರಿಗೂ ಕಾಣದಂತೆ ತಿರುಗಾಡುತ್ತಿರುತ್ತಾರೆ."

"ಇಲ್ಲಿ ನಿನ್ನ ಜತೆ ಯಾರಿದಾರೆ? ಯಾರ್‍ಯಾರು ಬರ್ತಾ ಇರ್ತಾರೆ?"

"ಇಲ್ಲಿ ನಾನೊಬ್ಬನೇ. ಈ ಫಾರಂನ ಕೆಲಸಗಾರರು ಮಾತ್ರ ಬರ್ತಾರೆ."

"ನಿನ್ನ ಹೆಂಡತಿ ಮಕ್ಕಳು?"

"ನನ್ನ ಹೆಂಡತಿ ಎಷ್ಟೋ ವರ್ಷಗಳ ಹಿಂದೆಯೇ ಮಹಾದೇವಯ್ಯನ ಹಿಂದೆ ಓಡಿ ಹೋದಳು. ಗಂಡು ಮಕ್ಕಳೂ ಮನೆ ಬಿಟ್ಟು ಹೋದರು."

"ಹೆಂಡತಿಯನ್ನು ಅವನಿಗೆ ವಹಿಸಿಕೊಟ್ಟು, ಹಾಯಾಗಿದೀಯಲ್ಲ. ನಿಂಗೆ ಏನೂ ಅನ್ನಿಸುಲ್ವಾ!"

"ಅನ್ನಿಸುತ್ತೆ. ಏನೇನೋ ಅನ್ನಿಸುತ್ತೆ. ಎಲ್ಲಾ ಮಾಡುಕ್ಕಲ್ಲ ಆಗುತ್ತೆ? ಮಹಾದೇವಯ್ಯ ಕೇಡಿಗ. ಏನು ಮಾಡುಕ್ಕೂ ಹೇಸುಲ್ಲ."

"ಎಲ್ಲಾ ತಿಳಿದಿದ್ದೂ ನೀನಿನ್ನು ಅವನ ಸಹವಾಸದಲ್ಲಿದೀಯಲ್ಲ. ನಿಮ್ಮಂಥೋರು ಪೋಲೀಸ್ ಡಿಪಾರ್ಟ್‌ಮೆಂಟ್‌ನಲ್ಲಿ ಇದ್ದುದರಿಂದಲೇ ಕುಕರ್ಮಿಗಳು ಹೆಚ್ಚಾದದ್ದು."

"ಬಡತನ ಕೆಟ್ಟದು ಕಣಪ್ಪಾ. ಪ್ರಾಮಾಣಿಕತೆ ಇದ್ದರೆ ಬಡತನವೇ."

"ಅಂದರೆ ಪ್ರಾಮಾಣಿಕತೆಯನ್ನು ಮಾರಿಕೊಂಡಿದೀಯ ಅಂತ ನೀನೇ ಒಪ್ಪಿಕೊಂಡಿದೀಯ. ಈಗ ನೀನು ನಿಜ ಹೇಳಿದೀಯ ಅಂತ ಹೇಗೆ ನಂಬೋದು?"

"ನೀನು ನಮ್ಮ ಸಾಹೇಬರ ಮಗ. ಅವರಿಗಾದ ತೊಂದರೆಗೆ ನನಗೂ ವಿಷಾದವಿದೆ. ಅವರು ಆತ್ಮಹತ್ಯೆ ಮಾಡ್ಕೋಬಾರದಾಗಿತ್ತು."

"ಅದು ಆತ್ಮಹತ್ಯೆ ಅಲ್ಲ. ಕೊಲೆಯೇ. ನಿನ್ನ ಹತ್ತಿರ ಏನೇನು ವಿವರಗಳಿವೆಯೋ ಅದನ್ನು ನನಗೆ ಒಪ್ಪಿಸು. ಇನ್ನು ಎಷ್ಟು ವರ್ಷ ಇಂಥಾ ಹೇಯವಾದ ಜೀವನವನ್ನು ನಡೆಸ್ತೀಯಾ?"

"ಅಷ್ಟರಲ್ಲಿ ಅವನಿಗೆ ಫೋನು ಬಂದಿತ್ತು. ನರೇಶ ಮಾತಾಡಿದ." ನನ್ನ ಸ್ನೇಹಿತ ನನ್ನ ಹಳ್ಳಿಯಿಂದ ಬಂದಿದಾನೆ. ಅವನಿಗೆ ದಂತದ ವಿಗ್ರಹಗಳು ಬೇಕಂತೆ ಏನು ಹೇಳ್ಲಿ?"

"..............................."

"ನಿಜಾನೇ ಹೇಳ್ತಿದೀನಿ ಬಾಸ್. ಅವನು ಇನ್ನು ಇಲ್ಲೇ ಇದಾನೆ. ನೀವೇ ಮಾತಾಡಿ, ನಾನು ಅವನಿಗೆ ಫೋನು ಕೊಡ್ಲಾ?"

".... ........................"

"ಆಯ್ತು ಬಾಸ್, ನಾನು ಅವನನ್ನು ನಿಮ್ಮ ಹಳ್ಳಿಗೇ ಕರ್ಕೊಂಡು ಬರ್ತೀನಿ" ಈಗ ಅವನನ್ನು ಕಳಿಸ್ತೀನಿ." ಮಾತು ಮುಗಿಸಿ ಇವನ ಕಡೆ ನೋಡಿ ನಕ್ಕ. "ಅವನು ನಿನ್ನನ್ನು ಫಾಲೋ ಮಾಡ್ಕೊಂಡು ಬಂದಿರಬಹುದು. ನಿನ್ನ ಬೈಕ್ ನೋಡಿ ಅನುಮಾನದಿಂದ ಫೋನು ಮಾಡಿದಾನೆ. ನೀನಿನ್ನು ಹೋಗು. ಎರಡು ದಿನ ಬಿಟ್ಟು, ಅವನ ಮನೆಯ ಬಳಿಗೆ ಬಾ."

"ಇದರಲ್ಲಿ ಏನೋ ಸಂಚು ಇದೆ. ಅವನು ನಿನ್ನ ಮನೆಯೊಳಗೇ ಅಡಗಿರಬಹುದು ಅಂತ ಅನುಮಾನ."

"ಬೇಡ ಗುರು, ಅವನು ಅಪಾಯಕಾರಿ ಮನುಷ್ಯ. ಇಲ್ಲಿಂದ ಹತ್ತು ಕಿಲೋ ಮೀಟರ್ ದೂರದಲ್ಲೆಲ್ಲೋ ಇದಾನೆ. ನಾನು ಹೇಳಿರೋದೆಲ್ಲಾ ನಿಜ."

"ನೀನು ಆಡಿರುವ ಮಾತುಗಳೆಲ್ಲಾ ರೆಕಾರ್ಡ್ ಆಗಿದೆ. ತಿಳ್ಕೋ" ಎನ್ನುತ್ತಾ ರೆಕಾರ್ಡರ್‌ನ್ನು ತೋರಿದ. ಅವನು ಕಂಗಾಲಾದ. ತನ್ನ ಬಳಿ ಇದ್ದ ಕೆಲವು ಡೈರಿಗಳನ್ನು ಫೈಲ್ಸ್‌ಗಳನ್ನು ಅವನ ಕೈಗಿತ್ತ.

"ನೀನು ಈಗ ಹೋಗುವುದೇ ಒಳ್ಳೆಯದು. ಅವನು ಇಲ್ಲೇ ಎಲ್ಲೋ ಹತ್ತಿರದಲ್ಲಿ ಸುತ್ತಾಡುತ್ತಾ ಇರ್ತಾನೆ."

"ನಮ್ಮಿಬ್ಬರ ಮಾತುಗಳನ್ನು ಅವನು ಕೇಳಿಸಿಕೊಂಡಿದ್ದರೇ.."

"ಇಲ್ಲ, ಅಂತಹ ಸಾಧನಗಳು ಇಲ್ಲಿ ಯಾವುದೂ ಇಲ್ಲ. ಅವನಿಗೆ ನನ್ನ ಮೇಲೆ ನಂಬಿಕೆ ಇದೆ. ನಾನು ಈಗ ದ್ರೋಹ ಮಾಡಲು ಹೊರಟಿದೀನಿ."

"ನೀನು ಹೆದರಬೇಡ ನರೇಶ್. ನಿನ್ನನ್ನು ರಕ್ಷಿಸುವ ಜವಾಬ್ದಾರಿ ನನ್ನ ಮೇಲಿದೆ. ಎರಡು ದಿನಗಳ ನಂತರ ನಾನು ಮತ್ತೆ ಬರ್ತೀನಿ. ನನ್ನನ್ನು ಆ ಮನೆಗೆ ಕರೆದುಕೊಂಡು ಹೋಗು."

"ನೀನೂ ಹುಶಾರಾಗಿರು ಭಾಸ್ಕರ. ಅವನು ಬಹಳ ಅಪಾಯಕಾರಿ ಮನುಷ್ಯ."

"ಇದೇ ಬುದ್ಧಿ ಆಗ ಇದ್ದಿದ್ದರೆ, ನನ್ನ ತಂದೆ ಸಾಯುತ್ತಿರಲಿಲ್ಲ"

"ಈಗ ಬುದ್ಧಿ ಬರ್ತಿದೆ." ಅವನು ನಕ್ಕಂತೆ ಮಾಡಿದ. ಅಲ್ಲಿಂದ ಹೊರಟ. ಭಾಸ್ಕರನಿಗೆ, ನರೇಶನ ಮಾತಿನ ಮೇಲೆ ವಿಶ್ವಾಸವಿರಲಿಲ್ಲ. ಈಗಲೂ ಅವನು ಅವನ

ಬಂಟನೇ ಎಂಬ ಅನುಮಾನ ಇದ್ದೇ ಇತ್ತು. ಅಲ್ಲಿಂದ ಸೀದಾ ತನ್ನ ಮನೆಗೆ ಬಂದ. ಆದಷ್ಟು ಬೇಗ ಗಂಟು ಮೂಟೆ ಕಟ್ಟಿ ಮನೆ ಖಾಲಿ ಮಾಡಬೇಕೆಂದು ಕೊಂಡ. ಪ್ರಿಯಾ ಅವನಿಗಾಗಿ ಕಾಯುತ್ತಾ ಕೂತಿದ್ದಳು.

"ಎಲ್ಲಿಗೆ ಹೊರಟು ಹೋಗಿದ್ರಿ? ಅರ್ಧ ಗಂಟೆಯಿಂದ ಕಾಯ್ತಾ ಇದೀನಿ."

"ನೀನು ಇಲ್ಲಿಗೆ ಬರಬಾರದಾಗಿತ್ತು ಪ್ರಿಯಾ. ನೀನು ಆದಷ್ಟು ಬೇಗ ನಿನ್ನ ತಂದೆಯ ಮನೆಗೆ ಹೋಗಿ ಬಿಡು."

"ಅವನು ಫೋನು ಮಾಡಿದ್ದ. ಹಾಗೇ ಹೇಳಿದೀನಿ. ನಾನು ಇಲ್ಲಿಯೇ ಇರ್ತೀನಿ. ನಾನು ಮತ್ತೆ ಆ ಮನೆಗೆ ಹೋಗುವುದಿಲ್ಲ. ನೆನ್ನೆ ರಾತ್ರಿ ಯಾರೂ ಬರಲಿಲ್ಲ. ನಾನು ಹಿಂಬಾಗಿಲನ್ನು ತೆರೆದು ಇಟ್ಟಿದ್ದೆ."

"ನಿನಗೆ ಗೊತ್ತಾಗಿಲ್ಲ. ಆ ಕೆಲಸ ಆಗಿದೆ. ಆದರೆ ಒಂದು ವಿಷಯವನ್ನು ನಿನಗೆ ತಿಳಿಸಲೇ ಬೇಕು. ನಿನ್ನ ಗಂಡನಿಗೆ ಅನುಮಾನ ಬಂದಂತಿದೆ. ನರೇಶ ಎನ್ನುವ ವ್ಯಕ್ತಿ ಈಗಾಗಲೇ ಏನಾಗಿದಾನೋ?"

"ಏನು ನಿಮ್ಮ ಮಾತಿನ ಅರ್ಥ?"

"ನೀನು ಕೊಟ್ಟ ಡೈರಿಯಲ್ಲಿ ನರೇಶ ಎಂಬುವನ ಹೆಸರಿತ್ತು. ಅವನು ನಮ್ಮ ಇಲಾಖೆಯಲ್ಲಿ ನಮ್ಮ ತಂದೆಯ ಕಾಲದಲ್ಲಿ ಕಾನ್‌ಸ್ಟೇಬಲ್ ಆಗಿದ್ದವನು. ಅವನು ಇವನ ಗ್ಯಾಂಗಿನಲ್ಲಿದಾನೆ. ನಾನು ಅವನ ಬಳಿ ಮಾತಾಡಲು ಹೋಗಿದ್ದೆ. ಆಗ ನಿನ್ನ ಗಂಡ ಅವನಿಗೆ ಫೋನು ಮಾಡಿದ್ದ."

"ಅವನು ನನ್ನ ಗಂಡನಲ್ಲ"

"ಅವನು ನಿನ್ನನ್ನು ಮದುವೆಯಾಗಿದಾನಲ್ಲ. ಅವನು ಈ ರಾತ್ರಿ ಮನೆಗೆ ಬರುತ್ತಾನೆ. ನಾವು ಅವನನ್ನು ಹಿಡಿಯುತ್ತೇವೆ. ನೀನು ಅಲ್ಲಿರ ಕೂಡದು. ಹೊರಟು ಬಿಡು." ಅವಳು ಅನುಮಾನಿಸುತ್ತಾ ಅಲ್ಲಿಂದ ಹೊರಟಳು. ಅವನು ತನ್ನ ಸಿಬ್ಬಂದಿಯವರಿಗೆ ಕೆಲವು ಸಲಹೆಗಳನ್ನು ಕೊಡಲು ತಾನಿದ್ದ ಪೋಲಿಸ್ ಸ್ಟೇಷನ್‌ಗೆ ಬಂದು, ಮೀಟಿಂಗ್ ಕರೆಸಿದ.

* * *

ಆ ರಾತ್ರಿ, ಮಹಾದೇವಯ್ಯನ ಮನೆಯ ಹತ್ತಿರ ಕಾದಿದ್ದೇ ಆಯಿತು. ಅಲ್ಲಿಗೆ ಯಾರೂ ಬರಲಿಲ್ಲ. ಅಲ್ಲಿದ್ದ ಮುದುಕಿಯನ್ನು ಜೀಪಿನಲ್ಲಿ ಕೂರಿಸಿ, ಆ ಮನೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಅವನ ಅನುಮಾನ ನಿಜವಾಗಿತ್ತು. ನರೇಶನನ್ನು ಅರೆಸ್ಟ್ ಮಾಡಲು, ಒಬ್ಬ ಅಧಿಕಾರಿಯನ್ನು ಕಳಿಸಿ, ತಾನು ಪೋಲೀಸ್ ವೇಷವನ್ನು ಬಿಚ್ಚಿ, ಸಾದಾ ಉಡುಪನ್ನು ಧರಿಸಿ, ಪ್ರಿಯಾಳ ತಂದೆಯ ಊರಿಗೆ ಹೊರಟ.

ಅವನ ಸಂಶಯದಂತೆ, ಮಹಾದೇವಯ್ಯ ಈಗಾಗಲೇ ಅಲ್ಲಿಗೆ ಬಂದು ಅಡಗಿಕೊಂಡಿದ್ದ. ಪ್ರಿಯಾ ಅಲ್ಲಿಗೆ ಇನ್ನು ತಲುಪಿದ್ದಾಳೋ ಇಲ್ಲವೋ ಎನ್ನುವ

ಅನುಮಾನ ಕಾಡಿತ್ತು. ಇವನು ಬಸ್ಸಿನಿಂದ ಇಳಿದು ಕಾಲು ನಡಿಗೆಯಲ್ಲೇ ಅವರ ಮನೆಯನ್ನು ತಲುಪಿದ. ಬಾಗಿಲನ್ನು ತೆರೆದವರು ಪ್ರಿಯಾಳ ತಂದೆ.

"ನರೇಶ್ ಎನ್ನುವ ವ್ಯಕ್ತಿ ನನ್ನನ್ನು ಇಲ್ಲಿಗೆ ಕಳಿಸಿದಾನೆ. ಮಹಾದೇವಯ್ಯನ ಹತ್ತಿರ ಮಾತನಾಡಬೇಕಾಗಿತ್ತು."

"ನಾನೇ ಮಹಾದೇವಯ್ಯ. ಏನಾಗಬೇಕಾಗಿತ್ತು?" ಒಳಗಿನಿಂದ ಅವನು ಬಂದು ನಿಂತ. ಅವನ ಕೈಯಲ್ಲಿ ಗನ್ ಇತ್ತು.

"ನಾನು ಇನ್‌ಸ್ಪೆಕ್ಟರ್ ಭಾಸ್ಕರ್. ನಿನ್ನನ್ನು ಅರೆಸ್ಟ್ ಮಾಡಲು ಬಂದಿದ್ದೇನೆ."

"ಓ... ನೀನೇನೋ... ನೀನು ಇಲ್ಲಿಗೆ ಬರ್ತೀಯ ಅಂತ ಅಂದುಕೊಂಡಿರಲಿಲ್ಲ. ಜೀವದ ಮೇಲೆ ಆಸೆ ಇದ್ದರೆ ಸುಮ್ಮನೆ ಹೊರಟು ಹೋಗು."

"ನಾನು ನನ್ನ ತಂದೆಯಂತೆ ಹೇಡಿಯಲ್ಲ. ನನಗೆ ಯಾವ ಭಯವೂ ಇಲ್ಲ. ನನ್ನ ಇಲಾಖೆಯವರು, ಇಲ್ಲಿ ಎಲ್ಲೆಲ್ಲೂ ಇದಾರೆ. ನೀನಾಗಿಯೇ ನೀನು ಸರಂಡರ್ ಆಗದಿದ್ದರೆ ಷೂಟ್ ಮಾಡಬೇಕಾಗುತ್ತದೆ."

"ಆ ಕಷ್ಟ ನಿನಗೆ ಬೇಡ. ನಾನೇ ನಿನ್ನನ್ನು ಅಪರಾಧಿಯನ್ನಾಗಿ ಮಾಡ್ತೀವಿ" ಎನ್ನುತ್ತಾ ಪ್ರಿಯಾಳ ತಂದೆಗೆ ಗುರಿ ಇಟ್ಟು ಹೊಡೆದ. ಆತ ಕೆಳಗುರುಳಿದರು. ಮರುಕ್ಷಣದಲ್ಲಿ ಭಾಸ್ಕರ ಅವನ ಕಡೆ ಗುರಿ ಇಟ್ಟು ಹೊಡೆದ. ಕಾಲಿಗೆ ಏಟು ಬಿದ್ದಿತ್ತು. ಅವನ ಕೈಯಿಂದ ಗನ್ ಕೆಳಗೆ ಬಿದ್ದಿತ್ತು. ಅವನೂ ಕೆಳಗೆ ಬಿದ್ದ. ಅವನ ಕೈಗೆ ಕೋಳವನ್ನು ತೊಡಿಸಿ, ಅವನನ್ನು ಸರ್ಕಾರಿ ಆಸ್ಪತ್ರೆಗೆ ಕರೆದೊಯ್ದರು. ಆತನನ್ನು ಆಸ್ಪತ್ರೆಗೆ ಸೇರಿಸಿದ.

ಸ್ವಲ್ಪ ಹೊತ್ತಿನಲ್ಲೇ ಪ್ರಿಯಾ ನರೇಶನೊಂದಿಗೆ ಅಲ್ಲಿಗೆ ಬಂದಳು. ನರೇಶ ತಾನಾಗಿಯೇ ಸರಂಡರ್ ಆದ. ಪ್ರಿಯಾ. ಓಡಿ ಬಂದು ಭಾಸ್ಕರನ ಕೈ ಹಿಡಿದಳು.

"ಇದೆಲ್ಲಾ ಏನು ಭಾಸ್ಕರ್... ನೀವ್ಯಾಕೆ ಇಲ್ಲಿಗೆ ಬಂದ್ರಿ?"

"ನಿನ್ನನ್ನು ಕರೆದೊಯ್ಯಲು. ಅವನು ಇಲ್ಲಿಗೆ ಬರ್ತಾನೆ ಎನ್ನುವ ಅನುಮಾನ ನನಗಿತ್ತು. ಇನ್ನು ನಿನಗೆ ಯಾವ ಭಯವೂ ಇಲ್ಲ" ಅವನೀಗ ಆಸ್ಪತ್ರೆಯಲ್ಲಿದಾನೆ."

"ಥ್ಯಾಂಕ್ಸ್ ಯೂ ಭಾಸ್ಕರ್" ಎನ್ನುತ್ತಾ ಅವನ ಎದೆಗೆ ಒರಗಿದಳು. ಗುರಿ ತಲುಪಿದ ನೆಮ್ಮದಿ ಅವನ ಮುಖದಲ್ಲಿ ಎದ್ದು ಕಾಣುತ್ತಿತ್ತು.

* *

# ಸಂಕೋಲೆ ಕಳಚಿದಾಗ...

ಶ್ರೀನಿವಾಸನಿಗೆ, ತನಗೆ ಜೈಲಿನಿಂದ ಬಿಡುಗಡೆ ಸಿಗುವುದೆಂಬ ನಂಬಿಕೆಯೇ ಹೋಗಿ ಬಿಟ್ಟಿತ್ತು. ಆದ್ದರಿಂದ ಅವನಿಗೆ ತಾನು ಬಿಡುಗಡೆಯಾಗಿ ಹೊರಗೆ ಬಂದದ್ದೇನೂ ಅತಿ ಸಂತೋಷವನ್ನು ನೀಡಿರಲಿಲ್ಲ. ತನ್ನ ಕೇಸನ್ನು ಮತ್ತೆ ಓಪನ್ ಮಾಡಿ ತನ್ನನ್ನು ಬಿಡುಗಡೆ ಮಾಡಿಸಿದ್ದು ನೀರಸವೆನಿಸಿತ್ತು. ಜೈಲು ಸೇರಿದಾಗಿನಿಂದ ತನ್ನ ಬಿಡುಗಡೆ ಅಸಾಧ್ಯವೆನಿಸಿತ್ತು.

ತಾನು ಮಾಡದೇ ಇದ್ದ ತಪ್ಪಿಗೆ, ತನಗೆ ಶಿಕ್ಷೆಯಾಗಿದ್ದು ಮೊದಲು ಮೊದಲು. ದುಃಖಕರವೆನಿಸಿದ್ದರೂ ಕ್ರಮೇಣ ಅವನು ಆ ವಿಷಯಕ್ಕೆ ಒಗ್ಗಿ ಹೋಗಿದ್ದ. ಮನಸ್ಸು ಯೋಚನೆ ಮಾಡುವುದನ್ನೇ ಬಿಟ್ಟು ಬಿಟ್ಟಿತ್ತು.

ಆದರೆ, ಈಗ ಶಾರದಾ ತನ್ನನ್ನು ಬಿಡುಗಡೆ ಮಾಡಿಸಿದ್ದು ಅತಿಶಯವೆನಿಸಲಿಲ್ಲ. ತನ್ನ ಬಿಡುಗಡೆಯಾದ ನಂತರ ಮುಂದೇನು ಎಂದು ಚಿಂತಿಸತೊಡಗಿದ. ಜೈಲಿನ ಆವರಣದಿಂದ ಹೊರಗೆ ಬಂದಾಗ ಮೊದಲು ಕಂಡದ್ದು ಶಾರದಾಳ ಕಾರು. ಕಾರಿನಿಂದ ಇಳಿದ ಶಾರದಾಳನ್ನು ಗುರುತಿಸುವುದು ಕಷ್ಟವೆನಿಸಿತ್ತು. ಅವಳು ಅವನ ಬಳಿಗೆ ಬಂದಾಗ ಹೇಗೆ ಪ್ರತಿಕ್ರಿಯಿಸಬೇಕೆಂದು ತಕ್ಷಣಕ್ಕೆ ತಿಳಿಯಲಿಲ್ಲ.

ಶಾರದಾ, ಅವನಿಗೆ ಸಂಜ್ಞೆ ಮಾಡಿ ಕಾರಿನಲ್ಲಿ ಕುಳಿತುಕೊಳ್ಳುವಂತೆ ಕೈ ತೋರಿದಳು. ಅವನು ಕುಳಿತ ನಂತರ ಕಾರನ್ನು ಸ್ಟಾರ್ಟ್ ಮಾಡಿದಳು. ಗಾಡಿ ಚಲಿಸುತ್ತಿರುವಾಗ ಇಬ್ಬರೂ ಮೌನವಾಗಿದ್ದರು. ಗಾಡಿ ಒಂದು ಮನೆಯ ಮುಂದೆ ನಿಂತಿತು. ಶಾರದಾ ಕೆಳಗಿಳಿದು ಈ ಕಡೆಯ ಬಾಗಿಲನ್ನು ತೆರೆದಳು. ಶಾರದಾ ಮುಂದೆ ಮುಂದೆ ನಡೆದು ಹೋಗಿ. ಮನೆಯ ಮುಂಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದು ಒಳಗೆ ನಡೆದಳು. ಕಾರಿನಿಂದ ಇಳಿದ ಶ್ರೀನಿವಾಸ. ನಿಧಾನವಾಗಿ ಅವಳನ್ನು ಹಿಂಬಾಲಿಸಿದ. ಅವನು ಅಲ್ಲಿಯೇ ವರಾಂಡದಲ್ಲಿ ನಿಂತ.

ಅಡುಗೆ ಮನೆಯಲ್ಲಿದ್ದ ಶಾರದಾಳಿಗೆ ಗೇಟು ತೆರೆದ ಸದ್ದು ಕೇಳಿಸಿ. ಹೊರ ಬಂದಳು. ಗೇಟಿನ ಬಳಿ ನಿಂತವನನ್ನು "ಓಹ್... ಸೀನಾ ಬನ್ನಿ ಒಳಗೆ" ಎಂದು ಕರೆದದ್ದು ಶ್ರೀನಿವಾಸನಿಗೆ ಕೇಳಿ ಮುಜುಗರವಾಯಿತು. ಒಳ ಬಂದ ವ್ಯಕ್ತಿ ಶ್ರೀನಿವಾಸ ನೋಡಿ ಗಲಿಬಿಲಿಗೊಂಡರು.

"ಇವರು ನನ್ನ ಸಂಬಂಧಿಕರು ಶ್ರೀನಿವಾಸ್ ಅಂತ" ಶ್ರೀನಿವಾಸನನ್ನು ಬಂದಿದ್ದಾಕೆಗೆ ಪರಿಚಯ ಮಾಡಿಕೊಟ್ಟಳು. ಇಬ್ಬರೂ ಪರಸ್ಪರ ನಮಸ್ಕಾರ ಎಂದು ನುಡಿದು ಕೈ ಮುಗಿದರು. ಶಾರದಾ ಇಬ್ಬರಿಗೂ ಕುಳಿತುಕೊಳ್ಳುವಂತೆ ಹೇಳಿ ಮತ್ತೆ ಒಳಗೆ ಹೋದಳು. ಎರಡು ತಟ್ಟೆಗಳಲ್ಲಿ ಕೋಡು ಬಳೆ. ರವೆ ಉಂಡೆಗಳನ್ನು ಇಟ್ಟುಕೊಂಡು ಹೊರಬಂದಳು. ಇಬ್ಬರಿಗೂ ತಿನ್ನಲು ಕೊಟ್ಟು, ನೀರನ್ನು ತಂದಿತ್ತಳು.

ಆಕೆ ತಿಂಡಿಯನ್ನು ತಿಂದು ಮುಗಿಸಿ. ಕರವಸ್ತ್ರದಿಂದ ಕೈ ಬಾಯನ್ನು ಒರೆಸಿಕೊಂಡು ಬಂದ ಕಾರಣವನ್ನು ಹೇಳಿದರು.

ಶಾರದಾ... ನಿಮ್ಮ ಮನೆಯ ಬಳಿ, ನಾಲ್ಕಾರು ಜನ ಗೂಂಡಾಗಳು ಬಂದು ನಿನ್ನ ಬಗ್ಗೆ ವಿಚಾರಿಸುತ್ತಿದ್ದರು... ನೀನು ಮನೆಯಲ್ಲಿ ಇಲ್ಲದುದನ್ನು ಕಂಡು ನಮ್ಮ ಮನೆಗೆ ಬಂದು ವಿಚಾರಿಸಿ, ಈ ಲಕೋಟೆಯನ್ನು ಕೊಟ್ಟು ಹೋದರು" ಎಂದು ಹೇಳಿ ಶಾರದಾಳ ಕೈಗೆ ಒಂದು ಲಕೋಟೆಯನ್ನು ಕೊಟ್ಟರು.

"ಆಕೆ ಅತ್ತ ಹೋದ ಕೂಡಲೇ ಶ್ರೀನಿವಾಸ "ಅವರು ಯಾರು ಬಂದಿದ್ದೋರು?" ಅಂತ ವಿಚಾರಿಸಿದ.

"ಪದ್ಮಾವತಮ್ಮ ಅಂತ ಆಗಲೇ ಪರಿಚಯ ಮಾಡಿಕೊಟ್ನಲ್ಲ. ಇಲ್ಲೇ ಪಕ್ಕದಲ್ಲಿ ಇದಾರೆ" ಎನ್ನುತ್ತಾ ಲಕೋಟೆಯನ್ನು ಒಡೆದು, ಒಳಗಿದ್ದ ಕಾಗದವನ್ನು ಹೊರ ತೆಗೆದು ಓದಿದಳು. ಅವಳ ಮುಖ ಬಿಳುಪೇರಿತು. ಅದನ್ನು ಗಮನಿಸಿದ ಶ್ರೀನಿವಾಸ ಅವಳಿಂದ ಕಾಗದವನ್ನು ಕಸಿದುಕೊಂಡು ಓದಿದ. ಅವನಿಗೂ ಮೈ ಬೆವೆತಿತು.

"ನಿನಗಿನ್ನು, ನಿನ್ನ ಸಂಸಾರಕ್ಕೆ, ನಿನ್ನ ಹೆಂಡತಿಗೆ ಆದುದು ಸಾಲದು ಅಂತ ತೋರುತ್ತದೆ. ನಿನ್ನ ಹೆಂಡತಿಯನ್ನು ಕಳೆದುಕೊಂಡೆ... ಈಗ ನಿನ್ನನ್ನು ಬಿಡಿಸಿರುವ ನಿನ್ನ ವಕೀಲಳಿಗೂ ಅದೇ ಗತಿ ಬರುತ್ತದೆ. ನಾನು ನಿನ್ನನ್ನು ಶಾರದಾಳನ್ನು ಸುಮ್ಮನೇ ಬಿಡುವುದಿಲ್ಲ ಅದಂತೂ ನಿಜ" ಎಂದು ಬರೆದಿತ್ತು. ಶಾರದಾಳ ಕಡೆ ನೋಡಿದ. ಅವಳು ಏನನ್ನೋ ಆಲೋಚಿಸುತ್ತಿರುವಂತೆ ಅನ್ನಿಸುತ್ತಿತ್ತು. ಮತ್ತೆ ಮತ್ತೆ ಕಾಗದವನ್ನು ಓದಿದ ಮೇಲೆ, ಅವನಿಗೆ ತನ್ನ ಶತ್ರುವಾದ ಆದಿಶೇಷಯ್ಯನಿಗೆ ತನ್ನ ಮೇಲಿನ ರೋಷ ಇನ್ನು ಕಡಿಮೆ ಆಗಿಲ್ಲವೆಂದುಕೊಂಡ. ಹೇಗಾದರೂ, ಸರಿ, ತಾನು ಹಾಗೂ ಶಾರದಾ ಆದಿಶೇಷಯ್ಯನಿಂದ ದೂರ ಹೋಗುವುದಾದರೂ ಎಲ್ಲಿಗೆ ಎಂದು ತಿಳಿಯಲಿಲ್ಲ. ಶಾರದಾಳನ್ನೇ ಕೇಳಿದ.

"ಆದಿಶೇಷಯ್ಯ ಕೇಡಿಗ. ನಮ್ಮಿಬ್ಬರಿಗೂ ತೊಂದರೆ ಕೊಡದೇ ಸುಮ್ಮನೆ ಇರುವವನಲ್ಲ. ನಾವು ಅವನಿಂದ ದೂರ ಎಲ್ಲಾದರೂ, ಅವನಿಗೆ ಕಾಣದಂತೆ ಇರುವುದೇ ಒಳ್ಳೆಯದು. ನೀನೇ ಅಂತಹ ಕ್ಷೇಮವಾಗಿರುವ ಜಾಗವನ್ನು ಸೂಚಿಸು" ಎಂದು ಕೇಳಿಕೊಂಡ.

ಶಾರದಾಳಿಗೂ ಪರಿಸ್ಥಿತಿಯ ಬಿಸಿ ಅರ್ಥವಾಗಿತ್ತು. ಅವಳೂ ಆತಂಕ ಗೊಂಡಿದ್ದಳು. ಯೋಚಿಸಿದವಳಿಗೆ ತನ್ನ ಚಿಕ್ಕಮ್ಮನ ಊರು ನೆನಪಾಗಿತ್ತು. ಚಿಕ್ಕಮ್ಮ

ಇದ್ದುದು ಶಿವಮೊಗ್ಗದ ಸಮೀಪದ ಒಂದು ಚಿಕ್ಕ ಊರಿನಲ್ಲಿ. ಶ್ರೀನಿವಾಸನಿಗೂ ಅದು ಸರಿಯಾದ ಸ್ಥಳವೆಂದೆನಿಸಿತ್ತು. ಆದರೂ ಆತಂಕ ಕಾಡಿತ್ತು. ಮೈಸೂರನ್ನು ಬಿಟ್ಟು ಅಷ್ಟು ದೂರದಲ್ಲಿ ಹೋಗಿ ಮಾಡುವುದಾದರೂ ಏನು ಅಂತ ಚಿಂತಿಸಿದ.

ಶಾರದಾ ತನ್ನ ಬಳಿ ಬರುತ್ತಿದ್ದ ಕಕ್ಷಿದಾರರ ಕೇಸುಗಳನ್ನೆಲ್ಲ ತನ್ನ ಸೀನಿಯರ್‌ಗೆ ಒಪ್ಪಿಸಿ ಕೊಟ್ಟು, ತನಗೆ ಬೇಕಾದ ಕೆಲವು ಮುಖ್ಯವಾದ ಪತ್ರಗಳನ್ನು ತನ್ನ ಕಿಟ್‌ಬ್ಯಾಗ್‌ನಲ್ಲಿ ಬಟ್ಟೆಗಳ ನಡುವೆ ಇಟ್ಟುಕೊಂಡಳು. ಕಳವಳದಿಂದ ಇಬ್ಬರೂ ಆ ರಾತ್ರಿಯನ್ನು ಕಳೆದರು. ಶಾರದಾ ಬೆಳಿಗ್ಗೆ ಎಂದಿನಂತೆ ಬೇಗ ಎದ್ದು, ತಿಂಡಿ ಕಾಫಿಯನ್ನು ತಯಾರಿಸಿ ಶ್ರೀನಿವಾಸನನ್ನು ಎಬ್ಬಿಸಿದಳು. ಇಬ್ಬರೂ ಬೇಗ ಬೇಗ ಸಿದ್ಧರಾದರು. ಶ್ರೀನಿವಾಸನೇ ಆಟೋ ತರಲು ಹೋದ. ಶಾರದಾ ಮುಂಬಾಗಿಲಿಗೆ ಬೀಗ ಹಾಕಿ ಬೀಗದ ಕೈಯನ್ನು ಪದ್ಮಾವತಮ್ಮನಿಗೆ ಕೊಟ್ಟಳು. ಶ್ರೀನಿವಾಸ ಆಟೋ ತಂದ. ತನ್ನನ್ನು ತಮ್ಮಿಬ್ಬರನ್ನು ಯಾರಾದರೂ ಗಮನಿಸುತ್ತಿರಬಹುದೇ ಎಂಬ ಅನುಮಾನ ಅವನನ್ನು ಕಾಡುತ್ತಲೇ ಇತ್ತು. ಲಗೇಜುಗಳನ್ನಿಟ್ಟು ಆಟೋ ಹತ್ತಿದರು. ಪದ್ಮಾವತಮ್ಮನಿಗೆ ಕೈ ಬೀಸಿದಳು ಶಾರದಾ. ಆಟೋ ಹೊರಟಿತು.

ಬಸ್‌ಸ್ಟ್ಯಾಂಡ್ ಬಳಿ ಆಟೋದಿಂದ ಇಳಿದು ಬಸ್‌ಸ್ಟ್ಯಾಂಡ್‌ನಲ್ಲಿ. ಶಿವಮೊಗ್ಗಾಕ್ಕೆ ಹೊರಡುವ ಬಸ್ಸು ನಿಲ್ದಾಣದಲ್ಲಿ ನಿಂತರು. ಬಸ್ಸು ಬಂದು ನಿಂತಾಗ ಅವಸರವಾಗಿ ಹತ್ತಿ, ಸೀಟನ್ನು ಹಿಡಿದು ಕುಳಿತರು. ಶಾರದಾಳೇ ಟಿಕೇಟನ್ನು ಖರೀದಿಸಿದಳು. ಬಸ್ಸು ಸಮಯಕ್ಕೆ ಸರಿಯಾಗಿ ಹೊರಟಿತು ಶ್ರೀನಿವಾಸ ಉಳಿದ ಪ್ರಯಾಣಿಕರ ಕಡೆ ತೀಕ್ಷ್ಣವಾಗಿ ಗಮನ ಹರಿಸಿದ. ಅನುಮಾನಾಸ್ಪದವಾದ ವ್ಯಕ್ತಿಗಳ್ಯಾರೂ ಇಲ್ಲ. ತಮ್ಮನ್ನು ಯಾರೂ ಹಿಂಬಾಲಿಸುತ್ತಿಲ್ಲವೆಂದು ಖಚಿತವಾದ ಮೇಲೆ ನಿರಾಳವಾಗಿ ಉಸಿರಾಡಿ ಸೀಟಿನ ಬೆನ್ನಿಗೆ ಒರಗಿ ಸರಿಯಾಗಿ ಕುಳಿತ.

ಶಿವಮೊಗ್ಗಾದ ಬಸ್‌ಸ್ಟ್ಯಾಂಡ್‌ನಲ್ಲಿ ಇಳಿದರು. ದುರ್ಗಿಗುಡಿ ಕಡೆಗೆ ಹೋಗಲು ಒಂದು ಆಟೋ ಹಿಡಿದು ಹತ್ತಿ ಕುಳಿತರು. ಚಿಕ್ಕಮ್ಮನ ಮಗನ ಮನೆ ಅದು. ಚಿಕ್ಕಮ್ಮ ಅಲ್ಲಿಯೇ ಇದ್ದಳು. ಬಾಗಿಲನ್ನು ತೆರೆದು ಶಾರದಾಳನ್ನು ಕಂಡು ಚಿಕ್ಕಮ್ಮನ ಮುಖ ಅರಳಿತು. "ಅರೇ, ಶಾರದಾ... ಏನಾಶ್ಚರ್ಯ?" ಎಂದು ನುಡಿದವಳು ಶಾರದಾಳ ಹಿಂದೆ ನಿಂತಿದ್ದ ಶ್ರೀನಿವಾಸನನ್ನು ಕಂಡು ಮೌನಿಯಾದಳು. ಅವಳ ಮುಖ ಸಪ್ಪಗಾಗಿತ್ತು. ಶಾರದಾಳನ್ನು ಕಂಡರೇ ಆಗದಿದ್ದ ಈ ಶ್ರೀನಿವಾಸ ಇವಳ ಜೊತೆಯಲ್ಲಿ ಯಾಕೆ ಬಂದಿದ್ದಾನೆ?.....

"ನಮ್ಮನ್ನು ಒಳಕ್ಕೆ ಬನ್ನಿ ಅಂತ ಕರೆಯಲ್ವಾ ಚಿಕ್ಕಮ್ಮಾ.." ಶಾರದಾ ಪ್ರಶ್ನಿಸಿದಾಗ, ಚಿಕ್ಕಮ್ಮ ಎಚ್ಚೆತ್ತು "ಒಳಗೆ ಬನ್ನಿ" ಎಂದು ಕರೆದು ಸಪ್ಪಗೆ ನಕ್ಕಳು. ಲಗೇಜುಗಳನ್ನು ಒಳತಂದು, ಇಬ್ಬರೂ ಅಲ್ಲಿದ್ದ ಕುರ್ಚಿಗಳ ಮೇಲೆ ಕುಳಿತರು.

"ಒಂದು ಗಳಿಗೆ ಸುಧಾರಿಸಿಕೊಂಡು, ಎದ್ದು ಕೈಕಾಲು ಮುಖ ತೊಳೆಯಿರಿ, ಊಟಕ್ಕೆ ತಟ್ಟೆ ಹಾಕ್ತೀನಿ."

"ಪರವಾಗಿಲ್ಲ ಚಿಕ್ಕಮ್ಮ, ಬೆಳಿಗ್ಗೆ ಮಾಡಿದ್ದ ಉಪ್ಪಿಟ್ಟು ಉಳಿದಿತ್ತು. ಅದನ್ನು ತಂದಿದ್ದೇನೆ. ನೀವು ತೊಂದರೆ ತಗೋಬೇಡಿ" ಎಂದಳು.

"ಸುಮ್ಮನೇ ಏಳಿ, ಊಟದ ಹೊತ್ತಾಗಿದೆ. ಬಡಿಸ್ತೀನಿ" ಎನ್ನುತ್ತಾ ಚಿಕ್ಕಮ್ಮ ತಟ್ಟೆ ನೀರಿನ ಲೋಟಗಳನ್ನಿಟ್ಟು ಊಟದ ಚಾಪೆಯನ್ನು ಹಾಸಿದಳು. ಶ್ರೀನಿವಾಸ ಮುಜುಗರದಿಂದ ಊಟಕ್ಕೆ ಕುಳಿತ. ಶಾರದಾ ಡಬ್ಬಿಯನ್ನು ತೆಗೆದು ಎರಡೂ ತಟ್ಟೆಗಳಿಗೆ ಉಪ್ಪಿಟ್ಟನ್ನು ಬಡಿಸಿದಳು. ಚಿಕ್ಕಮ್ಮ ಅನ್ನ, ಸಾರು, ಪಲ್ಯ ಗೊಜ್ಜುಗಳನ್ನು ಬಡಿಸಿದಳು.

"ಅದೇನು ಚಿಕ್ಕಮ್ಮ ಇಷ್ಟೊಂದು ಬಗೆ ಮಾಡಿದೀರಿ. ನಾವು ಬರ್ತೀವಿ ಅಂತ ಕನಸೇನಾದ್ರೂ ಬಿದ್ದಿತ್ತಾ?" ಶಾರದಾ ನಕ್ಕಳು. ಚಿಕ್ಕಮ್ಮ ನಗಲಿಲ್ಲ.

"ದಿನವೂ ಎರಡು ತರಕಾರಿ ಮಾಡೇ ಮಾಡ್ತೀನಿ. ನೀನು ಬರ್ತಿದೀ ಅಂತ ತಿಳಿಸಿದ್ದಿದ್ರೆ ಹುಳೀನೋ, ಕೂಟನ್ನೋ ಮಾಡಿ, ಹಪ್ಪಳ ಕರಿದಿಡುತ್ತಿದ್ದೆ" ಎಂದಳು.

ಶಾರದಾ ಗೋಮೆಯಿಟ್ಟು ಒರೆಸಿದ ನಂತರ ಚಿಕ್ಕಮ್ಮ ನುಡಿದಳು. ಪ್ರಯಾಣದಿಂದ ಸುಸ್ತಾಗಿರಬೇಕು. ಇಬ್ಬರೂ ಸ್ವಲ್ಪ ಹೊತ್ತು ವಿಶ್ರಾಂತಿ ತಗೊಳ್ಳಿ. ಅಲ್ಲಿ ರೂಮಿನಲ್ಲಿ ಚಾಪೆ. ದಿಂಬುಗಳಿವೆ ಎಂದಳು. ಶಾರದಾ ಚಾಪೆಗಳನ್ನು ಹಾಸಿ ದಿಂಬುಗಳನ್ನಿಟ್ಟು ಶ್ರೀನಿವಾಸನನ್ನು ಕರೆದಳು. ಶ್ರೀನಿವಾಸ ಚಾಪೆಯ ಮೇಲೆ ಮಲಗಿದ್ದ ಶಾರದಾಳ ಕಡೆ ಅನೇಕ ಬಾರಿ ನೋಡಿ, ಮೆಲ್ಲನೆ "ಶಾರದಾ..." ಅಂತ ಕರೆದ. ಅವಳಿಗೂ ನಿದ್ದೆ ಬಂದಿರಲಿಲ್ಲ. ಸುಮ್ಮನೇ ಕಣ್ಣು ಮುಚ್ಚಿ ಮಲಗಿದ್ದಳು. 'ಆಂ' ಎಂದಳು.

"ನಾವು ಇನ್ನು ಎಷ್ಟು ದಿನಗಳು ಇಲ್ಲಿರಬೇಕು?... ಯಾಕೋ ಈ ಸ್ಥಳವೂ ಸರಿಯಿಲ್ಲ ಅಂತ ಅನ್ನಿಸ್ತಿದೆ" ಎಂದ.

"ಇವತ್ತು ರಾತ್ರಿ ಕತ್ತಲಾದ ಮೇಲೆ ಹಳ್ಳಿಗೆ ಹೋಗೋಣ. ನಾನು ಚಿಕ್ಕಮ್ಮನ ಹತ್ರ ಮಾತಾಡ್ತೀನಿ..." ಶ್ರೀನಿವಾಸನಿಗೆ ಏನೋ ಸಂಶಯ. ಸ್ವಲ್ಪ ಸಮಯದ ನಂತರ ಇಬ್ಬರೂ ಹೊರ ಬಂದರು. ಶಾರದಾ ಚಿಕ್ಕಮ್ಮನ ಹತ್ರ ಮಾತನಾಡಿದಳು. ಚಿಕ್ಕಮ್ಮ ಅವರಿಬ್ಬರನ್ನು ಹಳ್ಳಿಯ ಮನೆಗೆ ಕಳಿಸುವ ವ್ಯವಸ್ಥೆ ಮಾಡಿದಳು.

ಅಲ್ಲಿ ಎಷ್ಟು ದಿನಗಳು ಬೇಕಾದರೂ ಇರಬಹುದು. ಮನೆಯಲ್ಲಿ ನಮ್ಮವರೇ ಒಬ್ಬರು ಇದಾರೆ. ಅವರು ನಿಮಗೆ ಎಲ್ಲಾ ಅನುಕೂಲಗಳನ್ನು ಒದಗಿಸಿ ಕೊಡ್ತಾರೆ. ನಾನು ಹೇಳಿದೆ ಅಂತ ಹೇಳಿ..." ಎನ್ನುತ್ತಾ ಶಾರದಾಳಿಗೆ ರವಿಕೆ ಖಣದೊಂದಿಗೆ ಎಲೆ ಅಡಿಕೆಯನ್ನಿಟ್ಟು ಕೊಟ್ಟು, ಆಶೀರ್ವಾದ ಮಾಡಿದಳು. ಆ ರಾತ್ರಿ ಇಬ್ಬರೂ ಹಳ್ಳಿಯ ಮನೆಯನ್ನು ಸೇರಿದರು.

ನಾಲ್ಕು ದಿನ ಕಳೆಯುವಷ್ಟರಲ್ಲಿ ಇಬ್ಬರಿಗೂ ಹಳ್ಳಿಯ ಜೀವನ ಬೇಸರವಾಗತೊಡಗಿತು. ಯೋಚಿಸಿ ಯೋಚಿಸಿ ಶ್ರೀನಿವಾಸ ನುಡಿದ.

"ಎಷ್ಟು ದಿನ ಅಂತ ಈ ಹಳ್ಳೀಲಿ ಇರುಕ್ಕೆ ಆಗುತ್ತೆ?... ಆದಿಶೇಷಯ್ಯನ ರೋಷ ಕಡಿಮೆ ಆಗಿರಬಹುದು... ನಾವು ಈ ಹಿಂದೆ ವಾಸವಾಗಿದ್ದ ಬಾಡಿಗೆ

ಮನೆಯೊಂದಿದೆ. ಎಲ್ಲಾ ರೀತಿಯಿಂದಲೂ ಅನುಕೂಲವಾಗಿದೆ. ಅಲ್ಲಿಗೆ ಬೇರೆ ಬಾಡಿಗೆಯವರು ಬರಲು ಹೆದರುತ್ತಾರೆ. ನಾವು ಅಲ್ಲಿ ಇರೋಣ. ಯಾರಿಗೂ ಗೊತ್ತಾಗುವುದಿಲ್ಲ."

ಶಾರದಾಳಿಗೆ ಅವನು ಹೇಳಿದ್ದು ಇಷ್ಟವಾಗಲಿಲ್ಲ. "ಆ ಪಾಳು ಬಿದ್ದ ವಾಪಸ್ಸು ಹೋಗೋಣ. ನಾನು ವಿಚಾರಿಸ್ತೀನಿ. ಬಾಡಿಗೆಯೂ ದುಬಾರಿಯಲ್ಲ.... ಹೀಗೆ ತಲೆ ಮರೆಸಿಕೊಂಡು ಎಷ್ಟು ದಿನಾಂತ ಬದುಕೋದು?"

"ಸರಿ ನಿಮ್ಮಿಷ್ಟ. ಆ ಮೇಲೆ ನನ್ನನ್ನು ದೂಷಿಸಬೇಡಿ. ಆ ಮನೆಯಲ್ಲಿ ಏನೋ ಒಂದು ಅನಾಹುತ ನಡೆದಿತ್ತು ಅಂತ ಹೇಳಿದ್ದಿರಿ ಅಲ್ಲವೆ?"

"ಹೌದು. ಆ ಅವಘಡ ನಡೆದು ಕೆಲವಾರು ವರುಷಗಳೇ ಕಳೆದಿವೆ. ಅದರೆ ಮನೆಯ ಮಾಲೀಕ ರಾಮಸ್ವಾಮಿ ಒಳ್ಳೆಯ ಮನುಷ್ಯ. ಯಾವ ಭಯವಿಲ್ಲ."

ರಾಮಸ್ವಾಮಿಗೆ ಕಾಗದವನ್ನು ಬರೆದು ಹಾಕಿ, ಮನೆಯ ಬಗ್ಗೆ ವಿಚಾರಿಸಿ ತಾನು ಬರುತ್ತಿರುವುದಾಗಿ ತಿಳಿಸಿದ್ದ. ಆ ಮನೆಯ ಹಿಂದೆ ಒಂದು ಪಾಳು ಬಾವಿ ಇತ್ತು. ಅದನ್ನು ನೆನೆಪಿಸಿಕೊಂಡ... ಯಾರೋ ಈ ಮುಂಚೆ ಹೇಳಿದ್ದ ಘಟನೆಗಳನ್ನು ಜ್ಞಾಪಿಸಿಕೊಂಡ.

ಬಹಳ ವರ್ಷಗಳ ಹಿಂದೆ, ಆ ಮನೆಯಲ್ಲಿ ಬಾಡಿಗೆಗೆ ವಾಸವಾಗಿದ್ದ ದಂಪತಿಗಳಿಗೆ ಮದುವೆಯಾದ ಎರಡು ವರ್ಷಗಳ ನಂತರ ಒಂದು ಮಗು ಹುಟ್ಟಿತ್ತು. ದುರದೃಷ್ಟವಶಾತ್ ಆ ಮಗು ಅಂಗವಿಕಲವಾಗಿತ್ತು. ಜನರು ತಲೆಗೊಂದು ಮಾತನ್ನಾಡಿದರು. ಮಗುವಿಗೆ ಅಂಗವಿಕಲವಾಗಲು ಆ ಬಾವಿಯ ನೀರೇ ಕಾರಣವೆಂದೂ ಹೇಳಿದರು. ಬಾವಿಯ ನೀರು ಉಪಯೋಗಿಸಲು ಲಾಯಕ್ಕಾಗಿರಲಿಲ್ಲವೆಂದೂ, ಕಲ್ಮಶಗೊಂಡಿತ್ತೆಂದೂ ಹೇಳಿದರು. ಈ ಮುಂಚೆ ಬಾವಿಯ ನೀರಿನ ಬಗ್ಗೆ ಯಾರೂ ಯಾವ ಮಾತನ್ನಾಡಿರಲಿಲ್ಲ. ವಿಧಿ ಇಲ್ಲದೇ ತಾವು ಆ ನೀರನ್ನೇ ಉಪಯೋಗಿಸಿದ್ದಕ್ಕೆ ದಂಪತಿಗಳು ತಮ್ಮನ್ನು ತಾವೇ ಹಳಿದುಕೊಂಡರು. ಮಗುವಿನ ಅಂಗವಿಕಲತೆಯ ಬಗ್ಗೆ ಜಿಗುಪ್ಸೆಗೊಂಡ ತಂದೆ, ಮಗುವನ್ನು ಕೊಚ್ಚಿ ಹಾಕಿ, ದೇಹದ ಭಾಗಗಳನ್ನು ಬಾವಿಗೆ ಎಸೆದು, ಹೆಂಡತಿಯೊಡನೆ ಆ ಊರನ್ನೇ ಬಿಟ್ಟು ಹೊರಟು ಹೋಗಿದ್ದ. ಅನುಮಾನ ಬಂದ ನೆರೆಹೊರೆಯವರು ಪೋಲೀಸರಿಗೆ ವಿಷಯವನ್ನು ತಿಳಿಸಿದರು. ಬಾವಿಯ ನೀರನ್ನು ಶೋಧಿಸುವಾಗ, ಮಗುವಿನ ಕೊಳೆತ ದೇಹದ ಭಾಗಗಳು ದೊರೆತವು. ಪೋಲೀಸರು ಆ ದಂಪತಿಗಳಿಗಾಗಿ ಹುಡುಕಾಟ ನಡೆಸಿದ್ದರು, ಪ್ರಯೋಜನವಾಗಿರಲಿಲ್ಲ. ಜೀವನದಲ್ಲಿ ಜಿಗುಪ್ಸೆಗೊಂಡ ಗಂಡ ಹೆಂಡತಿ ಸಹ ಆತ್ಮಹತ್ಯೆ ಮಾಡಿಕೊಂಡರೆಂದು ಆ ನಂತರ ತಿಳಿದಿತ್ತು. ನಂತರ ಎಷ್ಟೋ ವರ್ಷಗಳವರೆಗೂ ಆ ಮನೆಯು ಬಾಡಿಗೆದಾರರಿಲ್ಲದೇ ಪಾಳಾಗಿಯೇ ಬಿದ್ದಿತ್ತು.

ಶ್ರೀನಿವಾಸ ಶಾಂತಾಳನ್ನು ಮದುವೆಯಾದನಂತರ ಬಾಡಿಗೆಗೆ ಮನೆಯನ್ನು ಹುಡುಕುತ್ತಿದ್ದಾಗ ರಾಮಸ್ವಾಮಿ, ತಾನೇ ಖುದ್ದಾಗಿ ಶ್ರೀನಿವಾಸನನ್ನು ಭೇಟಿಯಾಗಿ

ತನ್ನ ಮನೆಯ ಬಗ್ಗೆ ತಿಳಿಸಿದ. ಬಾಡಿಗೆ ಕಡಿಮೆ ಎಂದು ತಿಳಿದ ಶ್ರೀನಿವಾಸ ಆ ಮನೆಯ ಐತಿಹ್ಯವನ್ನು ತಿಳಿದೂ, ವಾಸ ಮಾಡಲು ಒಪ್ಪಿಕೊಂಡ. ಶಾಂತಾಳಿಗೂ ಆ ವಿಷಯವನ್ನು ತಿಳಿಸಿದ್ದ. ಇಬ್ಬರೂ ಮನೆಯನ್ನು ನೋಡಿದರು, ಒಪ್ಪಿಗೆಯಾಗಿತ್ತು. ಮೊದಲು ಆ ಪಾಳು ಬಾವಿಯನ್ನು ಮುಚ್ಚಿಸಿ. ಮನೆಗೆ ಸುಣ್ಣ ಬಣ್ಣಗಳನ್ನು ಹೊಡೆಸಿ ನೀರಿಗೆ ಬೇರೆ ವ್ಯವಸ್ಥೆಯನ್ನು ಮಾಡಿ ಕೊಡಲು ರಾಮಸ್ವಾಮಿ ಒಪ್ಪಿಕೊಂಡ...

ರಾಮಸ್ವಾಮಿಯವರು, ಶ್ರೀನಿವಾಸನ ಪತ್ರಕ್ಕೆ ಮರು ಪತ್ರ ಬರೆದು, ಮನೆ ಈಗಲೂ ಖಾಲಿಯಾಗಿಯೇ ಇದೆಯೆಂದೂ, ಧಾರಾಳವಾಗಿ ಬಂದು ವಾಸ ಮಾಡಬಹುದೆಂದು ತಿಳಿಸಿದ್ದರು. ಶ್ರೀನಿವಾಸ ಆ ವಿಷಯವನ್ನು ಶಾರದಾಳಿಗೆ ಹೇಳಿದ. ಇಬ್ಬರೂ ವಾಪಸ್ಸು ಹೊರಡಲು ಅನುವಾದರು.

ಕೆಂಗೇರಿಯ ಸಮೀಪದ ಉಲ್ಲಾಳದಲ್ಲಿದ್ದ ಆ ಮನೆಗೆ ಶ್ರೀನಿವಾಸ ಶಾರದಾಳನ್ನು ಕರೆದೊಯ್ದ. ರಾಮಸ್ವಾಮಿ ಶಾರದಾಳನ್ನು ಕುತೂಹಲದಿಂದ ನೋಡಿದ. ಇದುವರೆಗೂ ಎಲ್ಲಿದ್ದನೆಂದು ಕೇಳುವ ಕುತೂಹಲವನ್ನು ತಡೆದಿಟ್ಟುಕೊಂಡ.

ಒಳಗಿನ ಮಲಗುವ ಕೋಣೆಗಳಲ್ಲಿ ಶಾಂತಾಳ ಬಟ್ಟೆಗಳು ಬೀರುಗಳಲ್ಲಿ ಹಾಗೇ ಇದ್ದುದನ್ನು ಶ್ರೀನಿವಾಸ ಗಮನಿಸಿದ್ದ. ಶಾರದಾಳಿಗೆ ತಿಳಿಯದಂತೆ ಅವುಗಳನ್ನು ಒಂದು ಚೀಲದೊಳಗೆ ತುರುಕಿ ಮುಚ್ಚಿಟ್ಟ.

ಶಾರದಾ ಶ್ರೀನಿವಾಸ ಆ ಮನೆಯಲ್ಲಿ ವಾಸಿಸತೊಡಗಿ ತಿಂಗಳಿಗಳೇ ಕಳೆದಿದ್ದವು. ಶ್ರೀನಿವಾಸ ಕೆಲಸದ ಹುಡುಕಾಟ ನಡೆಸಿದ್ದ. ಕೆಲವು ದಿನಗಳ ನಂತರ, ಅವನ ಅನುಭವಕ್ಕೆ ತಕ್ಕಂತೆ ಫ್ಯಾಕ್ಟರಿಯಲ್ಲಿ ಒಂದು ಕೆಲಸ ಸಿಕ್ಕಿತ್ತು. ಶಾರದಾ ತನ್ನ ಪ್ರಾಕ್ಟೀಸನ್ನು ನಿಧಾನವಾಗಿ ಶುರು ಮಾಡಿದಳು. ರಾಮಸ್ವಾಮಿ ಅವಳಿಗೆ ಸಹಾಯಕನಾಗಿ, ಕೆಲವು ಕಕ್ಷಿದಾರರನ್ನು ಗೊತ್ತು ಮಾಡಿಕೊಟ್ಟಿದ್ದ. ಶಾರದಾ ಆ ಕೇಸ್‌ಗಳನ್ನು ದಕ್ಷತೆಯಿಂದ ನಿರ್ವಹಿಸಿ, ಜಯ ಗಳಿಸಿದ್ದಳು. ರಾಮಸ್ವಾಮಿ ಹೊಗಳಿದ್ದ. ಶ್ರೀನಿವಾಸನ ಸಂಬಳ, ಶಾರದಾಳ ಫೀಸಿನ ಹಣದಿಂದ ಸಂಸಾರ ಸಾಗುತ್ತಿತ್ತು. ರಾಮಸ್ವಾಮಿಯಿಂದ ಯಾವುದೇ ಕಿರುಕುಳವಿರಲಿಲ್ಲ. ಅವರಿಬ್ಬರ ಜೀವನ ಯಾವ ಏರುಪೇರಿಲ್ಲದೇ ಸಾಗುತ್ತಿತ್ತು. ಆದರೆ ಅದು ಒಂದು ದಿನ ಬದಲಾಯಿತು.

ಆ ದಿನ, ಫ್ಯಾಕ್ಟರಿಯಿಂದ ಬಂದವನೇ, ನೇರವಾಗಿ ತನ್ನ ಕೋಣೆಗೆ ಹೋಗಿ ಮಲಗಿಬಿಟ್ಟ, ಅವನಿಗಾಗಿ ಅಡುಗೆ ಮಾಡಿಟ್ಟುಕೊಂಡು ಕಾಯುತ್ತಿದ್ದ ಶಾರದಾ ಅವನು ಎಷ್ಟು ಹೊತ್ತಾದರೂ ಹೊರಗೆ ಬಾರದಿದ್ದಾಗ, ಅವನ ಕೋಣೆಗೆ ಬಂದು ಬಗ್ಗಿ ನೋಡಿದಳು. ಅವನು ಮಲಗಿದುದನ್ನು ಕಂಡು ಗಾಬರಿಗೊಂಡಳು. ಮೆಲ್ಲನೆ ರೂಮಿಗೆ ಬಂದು ಅವನ ಹಾಸಿಗೆಯ ಬಳಿ ನಿಂತಳು. ಅವನು ಬೂಟ್ಸ್‌ಗಳನ್ನು ಸಹ ಬಿಚ್ಚದೇ ಮಲಗಿದ್ದುದು ಗಮನಕ್ಕೆ ಬಂದಿತು. ಅವಳು ಅವನ ಕಾಲುಗಳ ಬಳಿ ಕುಳಿತು ಅವನ ಬೂಟ್ಸ್‌ಗಳನ್ನು ಕಾಲು ಚೀಲಗಳನ್ನು ಬಿಚ್ಚಿದಳು. ಎರಡನ್ನು ಅವುಗಳನ್ನು ಇಡುತ್ತಿದ್ದ ಜಾಗದಲ್ಲಿಟ್ಟು ಕೈ ತೊಳೆದು ಬಂದಳು. ಆದರೂ ಅವನು ಅಲುಗಾಡಿರಲಿಲ್ಲ. ಅವನ

ಹಣೆಯ ಮೇಲಿಟ್ಟಳು. ಶ್ರೀನಿವಾಸ ನರಳಿದ.. ಮೆಲ್ಲನೆ ಕಣ್ಣು ತೆರೆದು ನೋಡಿದ. ಬಳಿಯಲ್ಲಿ ಶಾರದಾ ನಿಂತಿದುದನ್ನು ಕಂಡ. ಶ್ರೀನಿವಾಸ ಏಳಲೆಂದು ನೋಡಿದ, ಏಳಲಾಗಲಿಲ್ಲ. ಸುಸ್ತಾಗಿ ಹಿಂದಕ್ಕೆ ಒರಗಿದ. ಶಾರದಾ ಅವನ ದಿಂಬನ್ನು ಸರಿ ಮಾಡಿದಳು. ಶ್ರೀನಿವಾಸ ಏನನ್ನೋ ಹೇಳಬೇಕೆಂದು ಪ್ರಯತ್ನ ಪಟ್ಟ. ಆದರೆ ಉಸಿರು ಹೊರಡಲಿಲ್ಲ. ಶಾರದಾ ಹಾಲನ್ನು ಬಿಸಿ ಮಾಡಿ ತಂದು, ಅವನಿಗೆ ನಿಧಾನವಾಗಿ ಕುಡಿಸಿದಳು. ಅವನು ಮತ್ತೆ ಮಲಗಿದ. ತನ್ನ ಕೋಣೆಗೆ ಹೋಗಿ ಮಲಗಿದ ಶಾರದಾಳಿಗೆ ನಿದ್ದೆ ಬರಲಿಲ್ಲ.

ಬೆಳಗಾದ ಮೇಲೆ, ಎದ್ದು ಕಾಫಿಯನ್ನು ತಯಾರಿಸಿದಳು. ಶ್ರೀನಿವಾಸನ ಕೋಣೆಗೆ ಬಂದಳು. ಶ್ರೀನಿವಾಸನಿಗೆ ಇನ್ನು ಜ್ವರ ಬಿಟ್ಟಿರಲಿಲ್ಲ. ಅವನ ಹಣೆಯ ಮೇಲೆ ಕೈಯನ್ನಿಟ್ಟಾಗ ಅವನು ಎಚ್ಚರಗೊಂಡ. ಅವನನ್ನು ಎಬ್ಬಿಸಿ ಕೂರಿಸಿ. ಮುಖ ತೊಳೆದು ಅವನಿಗೆ ಕಾಫಿಯನ್ನು ಕುಡಿಸಿದಳು. ಅವನನ್ನು ಡಾಕ್ಟರರ ಬಳಿಗೆ ಕರೆದುಕೊಂಡು ಹೋಗಬೇಕೆಂದು ಕೊಂಡಳು.

ಅವನನ್ನು ಎಬ್ಬಿಸಿ ಕೂರಿಸಿ, ಒದ್ದೆ ಬಟ್ಟೆಯಲ್ಲಿ ಮೈಯನ್ನು ಒರೆಸಿ ಇಸ್ತ್ರಿ ಮಾಡಿಸಿದ್ದ ಷರಟು ಪ್ಯಾಂಟುಗಳನ್ನು ತೊಡಲು ಸಹಾಯ ಮಾಡಿದಳು. ತಲೆಗೂದಲನ್ನು ಬಾಚಿ, ಮುಖಕ್ಕೆ ತೆಳುವಾಗಿ ಪೌಡರನ್ನು ಹಚ್ಚಿ ಅವನನ್ನು ಸಿದ್ಧ ಮಾಡಿದಳು. ಅವನು ಕಿರು ನಗೆಯನ್ನು ನಕ್ಕಂತೆ ಮಾಡಿದ. ಅವನನ್ನು ಎಬ್ಬಿಸಿಕೊಂಡು, ಚಪ್ಪಲಿಗಳನ್ನು ತೊಡಿಸಿ, ಮನೆಯಿಂದ ಹೊರಕ್ಕೆ ಕರೆತಂದಳು. ಶ್ರೀನಿವಾಸನಿಗೆ ಪರಿಚಯವಿದ್ದ ಡಾಕ್ಟರ ಬಳಿಗೆ ಅವನನ್ನು ಕರೆದೊಯ್ದಳು.

ಡಾಕ್ಟರನ್ನು ಕಂಡು ಶ್ರೀನಿವಾಸನಿಗೆ ಹಳೆಯ ನೆನಪುಗಳು ಮರುಕಳಿಸಿದವು. ಈ ಹಿಂದೆ ಶಾಂತಾಳಿಗೆ ಒಮ್ಮೆ ಹುಶಾರಿಲ್ಲದಿದ್ದಾಗ ಅವಳನ್ನು ಈ ಡಾಕ್ಟರಿಗೆ ತೋರಿಸಿದ್ದ. ಆ ನೆನಪು ಒತ್ತಿಕೊಂಡು ಬಂದು ಮನಸ್ಸಿಗೆ ನೋವನ್ನುಂಟು ಮಾಡಿತು. ಈ ಡಾಕ್ಟರ್ ಕೂಡಾ ರಾಮಸ್ವಾಮಿಯ ಪರಿಚಯದವರೇ. ಶಾರದಾ, ಶ್ರೀನಿವಾಸನೊಡನೆ ತಮ್ಮ ಸರದಿಗಾಗಿ ಕಾಯುತ್ತಾ ಕುಳಿತಳು.

ಡಾಕ್ಟರ್ ಶ್ರೀನಿವಾಸನನ್ನು ಕಂಡು ಪರಿಚಯದ ಮುಗುಳ್ನಗೆಯನ್ನು ನಕ್ಕು ಇದುವರೆಗೂ ಎಲ್ಲಿದ್ದನೆಂದು, ಹೇಗಿದಾನೆಂದು ವಿಚಾರಿಸಿದರು. ಶ್ರೀನಿವಾಸ ಶಾರದಾಳ ಕಡೆ ನೋಡಿದ. ಅವಳು ನುಡಿದಳು.

"ಕೆಲಸದ ಮೇಲೆ ಪರ ಊರಿಗೆ ಹೋಗಬೇಕಾಗಿ ಬಂದಿತ್ತು" ಎಂದಳು. ಶ್ರೀನಿವಾಸ ಕಣ್ಣಿನಲ್ಲೇ ಕೃತಜ್ಞತೆಯನ್ನು ವ್ಯಕ್ತಪಡಿಸಿದ.

"ಈಗ ಇವರಿಗೆ ಏನು ತೊಂದರೆ?"

"ಎರಡು ದಿನಗಳಿಂದ ಬಂದ ಜ್ವರ ಬಿಟ್ಟಿಲ್ಲ." ಡಾಕ್ಟರ್ ಅವನನ್ನು ಒಳಗಿನ ಕೋಣೆಯಲ್ಲಿ ಮಲಗಿಸಿ ಕೂಲಂಕುಷವಾಗಿ ಪರಿಶೀಲಿಸಿ, ರಕ್ತ ಪರೀಕ್ಷೆ ಮಾಡಿಸುವಂತೆ ಸಲಹೆ ನೀಡಿದರು. ಕೆಲವು ಔಷಧಗಳನ್ನು ಬರೆದುಕೊಟ್ಟರು.

ಲ್ಯಾಬರೇಟರಿಯಲ್ಲಿ ರಕ್ತದ ಸ್ಯಾಂಪಲ್‌ನ್ನು ಕೊಟ್ಟು, ಮನೆಗೆ ಕರೆ ತಂದಳು. ಇಬ್ಬರಿಗೂ ಆತಂಕವಾಗಿತ್ತು. ಎರಡು ದಿನಗಳ ನಂತರ ಶಾರದಾ ತಾನೇ ಹೋಗಿ ಬ್ಲಡ್ ರಿಪೋರ್ಟ್‌ನ್ನು ತಂದಳು. ರಿಪೋರ್ಟ್‌ನಲ್ಲಿ ಟೈಫಾಯ್ಡ್ ಎಂದು ಬರೆದಿದುದನ್ನು ಓದಿಕೊಂಡಳು. ಡಾಕ್ಟರಿಗೆ ರಿಪೋರ್ಟ್‌ನ್ನು ತೋರಿಸಿ. ಕೆಲವು ಬೇರೆ ಬೇರೆಯ ಔಷಧಗಳನ್ನು ತಂದಳು. ಅವನಿಗೆ ಸಮಯಕ್ಕೆ ಸರಿಯಾಗಿ ಆಹಾರವನ್ನು ಔಷಧಿ ಮಾತ್ರೆಗಳನ್ನು ಕೊಡುವಂತೆ ಡಾಕ್ಟರು ತಿಳಿಸಿದ್ದರು.

ಎರಡು ವಾರ ಕಳೆದಿತ್ತು. ಪಥ್ಯದ ಊಟವನ್ನು ಮಾಡಿ ಬಾಯಿ ಕೆಟ್ಟು ಹೋಗಿತ್ತು. ಔಷಧಿಯನ್ನು ಸೇವಿಸುವುದು ಕಷ್ಟವೆನಿಸುತ್ತಿತ್ತು. ಬೇಯಿಸಿದ ತರಕಾರಿ ಹಣ್ಣಿನ ರಸಗಳನ್ನು ಕೊಡುತ್ತಿದ್ದಳು ಅವನ ನಾಲಿಗೆ ಜಡಗಟ್ಟಿತ್ತು. ಖಾರದ ಪದಾರ್ಥಗಳನ್ನು ತಿನ್ನಬೇಕೆಂಬ ಆಸೆಯಾಗುತ್ತಿತ್ತು. ಒಮ್ಮೆ ಅವಳು ಹಣ್ಣಿನ ರಸವನ್ನು ಕುಡಿಸಲು ಬಂದಾಗ, ಕೈ ಅಡ್ಡ ಮಾಡಿ, ನಿನಗೋಸ್ಕರ ಮಾಡಿಟ್ಟುಕೊಂಡಿರುವ 'ಕೊಡು ಎಂದು ಒರಟಾಗಿ ಹೇಳಿದ್ದ.

"ಸ್ವಲ್ಪ ತಾಳ್ಮೆಯಿಂದಿರಿ ಶ್ರೀನಿವಾಸ್, ಚೆನ್ನಾಗಿ ವಾಸಿ ಆದ ಮೇಲೆ ಏನು ಬೇಕಾದರೂ ತಿನ್ನಿ. ಈಗ ಹಣ್ಣಿನ ರಸವನ್ನು ಕುಡಿಯಿರಿ."

ಶ್ರೀನಿವಾಸ ಅವಳ ಮಾತಿಗೆ ಕಿವಿಗೊಡಲಿಲ್ಲ. ಹಠವನ್ನು ಮುಂದುವರೆಸಿದ. ತಾಳ್ಮೆಗೆಟ್ಟ ಶಾರದಾ ತನಗಾಗಿ ಮಾಡಿಟ್ಟುಕೊಂಡಿದ್ದ ಚಪಾತಿ ಪಲ್ಯವನ್ನು ತಂದು ಕೊಟ್ಟಳು. ಶ್ರೀನಿವಾಸ ಆತುರಾತುರವಾಗಿ ತಿನ್ನಲು ಪ್ರಾರಂಭಿಸಿದ. ಶಾರದಾ ಸಿಟ್ಟಿನಿಂದ ಅಲ್ಲಿಂದ ಹೊರಟು ಹೋಗಿದ್ದಳು.

ಅವಳಿಗೆ ನಿದ್ದೆ ಹತ್ತಿದಂತಾಗಿತ್ತು. ಶ್ರೀನಿವಾಸ 'ಶಾರದಾ' ಎಂದು ಜೋರಾಗಿ ಕರೆದಾಗಲೇ ಅವಳಿಗೆ ಎಚ್ಚರ. ಅವಳು ಎದ್ದು ಬರುವಷ್ಟರಲ್ಲಿ ಶ್ರೀನಿವಾಸ ತಿಂದಿದುದನ್ನೆಲ್ಲ ಕಕ್ಕಿ ಬಿಟ್ಟಿದ್ದ. ಅವಳಿಗೆ ಪೆಚ್ಚಾಯಿತು.

ಆ ರಾತ್ರಿ ಅವನಿಗೆ ಮತ್ತೆ ಜ್ವರ ಬಂದಿತ್ತು. ನಿದ್ದೆಯಲ್ಲಿ ಏನೇನನ್ನೋ ಬಡಬಡಿಸಿದ್ದ. ಬೆಳಗಾದ ಮೇಲೆ, ಶಾರದಾ ಅವನನ್ನು ಮತ್ತೆ ಡಾಕ್ಟರ ಬಳಿ ಕರೆದೊಯ್ದಳು. ಅವನನ್ನು ಪರಿಶೀಲಿಸಿದ ಡಾಕ್ಟರು ಹುಬ್ಬು ಗಂಟಿಕ್ಕಿ ಶಾರದಾಳ ಕಡೆ ತಿರುಗಿದರು.

"ತಿನ್ನೋಕೆ ಏನು ಕೊಟ್ಟಿದೀರಿ? ರಿಲಾಪ್ಸ್ ಆಗಿದೆ."

ಚಪಾತಿ ಪಲ್ಯ... ಬೇಕೂಂತ ಹಠ ಮಾಡಿದರು.

"ಪಥ್ಯದಲ್ಲಿಡಬೇಕು ಅಂತ ಹೇಳಿರಲಿಲ್ವಾ? ಖಾರವನ್ನೇಕೆ ಕೊಟ್ರಿ?" ಡಾಕ್ಟರು ಸಿಟ್ಟಾಗಿ ನುಡಿದರು. ಖಾರ ತಿನ್ನಬಾರದು. ಪದೇ ಪದೇ ರಿಲಾಪ್ಸ್ ಆದರೆ ಜೀವಕ್ಕೇ ಅಪಾಯ... ವಿಪರೀತ ಎಚ್ಚರಿಕೆಯಿಂದ ಇರಬೇಕು" ಎನ್ನುತ್ತಾ ಬೇರೆ ಮಾತ್ರೆಗಳನ್ನು ಬರೆದುಕೊಟ್ಟರು. ಶಾರದಾ ಪೆಚ್ಚಾಗಿದ್ದಳು. ಶ್ರೀನಿವಾಸನಿಗೆ ತನ್ನ ತಪ್ಪಿನ ಅರಿವಾಗಿತ್ತು. ತಲೆ ತಗ್ಗಿಸಿದ. ಹೊರ ಬಂದ ಮೇಲೆ. ಅವಳಿಗೆ ಹೇಳಿದ.

"ಶಾರದಾ ನನ್ನನ್ನು ಕ್ಷಮಿಸಿ ಬಿಡು" ಅವಳಿಗೂ ತಾನು ದುಡುಕ ಬಾರದೆಂದೆನಿಸಿತ್ತು.

"ಕ್ಷಮಿಸುವುದೇನಿದೆ? ನನ್ನದೂ ತಪ್ಪಿದೆ" ಎಂದಳು. ಇಬ್ಬರೂ ಮನೆಗೆ ಬಂದರು. ಶಾರದಾ ಹಣ್ಣಿನ ರಸವನ್ನು ಮಾಡಿಕೊಟ್ಟಳು. ಶ್ರೀನಿವಾಸ ಪೂರ್ತಿ ಕುಡಿದು ಅವಳ ಕಡೆ ನೋಡಿ ಮುಗುಳ್ನಕ್ಕ. ಅವಳೂ ಮುಗುಳ್ನಕ್ಕಳು. ಶ್ರೀನಿವಾಸ ಮಂಚದ ಮೇಲೆ ಮಲಗಿದ. ತಮ್ಮಿಬ್ಬರ ಬಗ್ಗೆಯೇ ಚಿಂತಿಸಿದ.

ಶಾರದಾ ಕೂಡಾ ಅವನ ಬಗ್ಗೆಯೇ ಯೋಚಿಸುತ್ತಿದ್ದಳು. ಅವನ ಅನಾರೋಗ್ಯದ ಬಗ್ಗೆ ಆತಂಕವಾಗಿತ್ತು. ಅವನಿಗೇನಾದರೂ ಅಪಾಯ ಒದಗಿದರೇ... ಎನ್ನುವ ಆಲೋಚನೆಯೇ ಅವಳಿಗೆ ಇಷ್ಟವಾಗಲಿಲ್ಲ. ಆಗಲೇ ಅವಳಿಗೆ ಅರಿವಾದದ್ದು ತಾನು ಅವನನ್ನು ಗಾಢವಾಗಿ ಪ್ರೀತಿಸುತ್ತಿದ್ದೇನೆಂದು. ಆದರೆ ಅವನೂ ತನ್ನನ್ನು ಪ್ರೀತಿಸುತ್ತಿರಬಹುದೇ ಇಲ್ಲವೆ? ಆ ಯೋಚನೆ ಅಧಿಕವಾಯಿತು. ಆ ರಾತ್ರಿ ಔಷಧಗಳನ್ನು ಕೊಡಲು ಬಂದಾಗ ಅವನನ್ನೇ ಓರೆಗಣ್ಣಿನಿಂದ ನೋಡಿ ಪರೀಕ್ಷಿಸಿದಳು. ಅವನು ಗೆಲುವಾಗಿದ್ದ. ನಗು ಮುಖದಿಂದ ಮಾತ್ರೆಗಳನ್ನು ನುಂಗಿದ. ಅವಳಿಗೆ ಸಮಾಧಾನವಾಗಿತ್ತು.

ಜ್ವರ ಬಿಟ್ಟ ನಂತರ ಮತ್ತೊಮ್ಮೆ ಕರೆದೊಯ್ದು ಚೆಕಪ್ ಮಾಡಿಸಿದಳು. ಅವನು ಹುಶಾರಾಗಿದ್ದಾನೆಂದು ತಿಳಿಸಿ ಶಾರದಾ ಅವನ ಬಗ್ಗೆ ಅಷ್ಟು ಮುತುವರ್ಜಿ ವಹಿಸಿದ್ದುದುದಕ್ಕೆ ಹೊಗಳಿದರು. "ಶಾರದಾ ನಿಮಗೇನಾಗಬೇಕು?" ಎಂದು ಅವರು ಪ್ರಶ್ನಿಸಿದಾಗ ಶ್ರೀನಿವಾಸ ತಡವರಿಸಿದ. ತನ್ನ ಅವಳ ಸಂಬಂಧದ ಬಗ್ಗೆ ತಿಳಿಸಲಿಲ್ಲ.

"ನಾನು ಕಷ್ಟದಲ್ಲಿದ್ದಾಗ ನನಗೆ ಸಹಾಯ ಮಾಡಿದ್ದಾಳೆ" ಎಂದಷ್ಟೇ ಹೇಳಿದ. ಡಾಕ್ಟರು ತಲೆ ತೂಗಿದರು. ಮತ್ತೆ ಪ್ರಶ್ನಿಸಲಿಲ್ಲ. ತಾನು ಹಾಗೆ ಹೇಳಿದುದು ಶಾರದಾಳಿಗೆ ಹಿಡಿಸಿತೋ ಇಲ್ಲವೋ ಎಂದು ಅವಳನ್ನು ಕೇಳಬೇಕೆಂದುಕೊಂಡರೂ ಕೇಳಲಾಗಿರಲಿಲ್ಲ.

ಅವನು ಕೈ ಕಾಲುಗಳನ್ನು ತೊಳೆದು ಬರುವಷ್ಟರಲ್ಲಿ ಶಾರದಾ ತಟ್ಟೆ ಬಟ್ಟಲುಗಳನ್ನಿಟ್ಟು ಅವನಿಗಾಗಿ ಕಾಯುತ್ತಿದ್ದಳು. ಅವಳು ಅನ್ಯ ಮನಸ್ಕಳಾಗಿರುವುದನ್ನು ಶ್ರೀನಿವಾಸ ಗಮನಿಸಿ, 'ಶಾರದಾ' ಎಂದ. ಅವಳು ಬೆಚ್ಚಿದಳು. ಅವಳು ಮೌನವಾಗಿಯೇ ಬಡಿಸಿದಳು. ಅವನು ನಿಧಾನವಾಗಿ ಊಟ ಮಾಡಿದ. ಆಗಾಗ್ಗೆ ಅವಳ ಕಡೆ ನೋಡುತ್ತಿದ್ದ. ಅವಳು ಯಾವುದೋ ಗಾಢ ಆಲೋಚನೆಯಲ್ಲಿರುವಂತೆ ಅನ್ನಿಸುತ್ತಿತ್ತು. ಅವನು ಊಟ ಮುಗಿಸಿ ಕೈ ತೊಳೆದು ಬಂದರೂ ಅವಳು ಅದೇ ಸ್ಥಿತಿಯಲ್ಲಿದ್ದಳು.

"ಏನಾಗಿದೆ ನಿನಗೆ?" ಅವಳನ್ನು ಅಲುಗಾಡಿಸಿ ಎಚ್ಚರಿಸಿ ಕೇಳಿದ.

"ಏನೂ ಇಲ್ಲ" ಎಂದು ಸಪ್ಪಗೆ ಹೇಳಿದಳು. ಅವನೇ ತಟ್ಟೆಗೆ ಅನ್ನ ಸಾರನ್ನು ಬಡಿಸಿ, ಕಲೆಸಿ, ಪಲ್ಯವನ್ನು ಹಾಕಿ, ತಟ್ಟೆಯನ್ನು ಅವಳ ಮುಂದೆ ಹಿಡಿದ. ಅವಳು ಹಾಗೇ ಕುಳಿತಿರುವುದನ್ನು ಗಮನಿಸಿ, ತಾನೇ ತುತ್ತನ್ನು ಮಾಡಿ ಅವಳಿಗೆ ತಿನ್ನಿಸಿದ.

ಅವಳು ನಿಧಾನವಾಗಿ ತಿಂದಳು. ನಾಲ್ಕು ತುತ್ತು ತಿಂದು ನಂತರ ತಾನೇ ತಿನ್ನಲು ಪ್ರಾರಂಭಿಸಿದಳು.

ಶ್ರೀನಿವಾಸ ಮತ್ತೆ ಕೆಲಸಕ್ಕೆ ಹೋಗಲು ಪ್ರಾರಂಭಿಸಿದ್ದ. ಶಾರದಾ ಕೆಲವು ಕೇಸನ್ನು ವಹಿಸಿಕೊಂಡಿದ್ದಳು. ಶ್ರೀನಿವಾಸ ರಾಮಸ್ವಾಮಿಗೆ ಬಾಡಿಗೆಯನ್ನು ಕೊಡಲು ಹೋದಾಗ ಆತ ಕೇಳಿದ.

"ನಿನ್ನ ಜೊತೆಯಲ್ಲಿರುವ ಆಕೆ, ನಿನಗೇನಾಗಬೇಕು?"

ಶ್ರೀನಿವಾಸ ಗಲಿಬಿಲಿಗೊಂಡರೂ, ರಾಮಸ್ವಾಮಿಯ ಬಳಿ ಮುಚ್ಚಿಡುವಂತಿರಲಿಲ್ಲ. "ಅವಳು ಶಾರದಾ.. ನನ್ನ ಪತ್ನಿಯಾಗುವವಳು" ಎಂದಾಗ, ರಾಮಸ್ವಾಮಿ ಮತ್ತೆ ಪ್ರಶ್ನಿಸಲಿಲ್ಲ. ಆ ದಿನವೇ ಶ್ರೀನಿವಾಸ ಶಾರದಾಳೊಡನೆ ಹೇಳಿದ.

"ನಾವಿಬ್ಬರೂ ಆದಷ್ಟು ಬೇಗನೇ ಮದುವೆಯಾಗೋಣ. ರಾಮಸ್ವಾಮಿಯವರಿಗೂ ಅನುಮಾನ ಬಂದಂತಿದೆ" ಎಂದ.

ಅವಳ ಮುಖ ಪೆಚ್ಚಾಗಿತ್ತು. ಆದರೂ "ಯಾವಾಗ ಮದುವೆಯಾಗೋಣ?" ಅಂತ ಕೇಳಿದಳು.

"ಆದಷ್ಟು ಬೇಗ... ಎರಡು ಮೂರು ದಿನಗಳ ಒಳಗೆ" ಅವನ ಮಾತಿಗೆ ಶಾರದಾ ಒಪ್ಪಿದಳು. ಮದುವೆಗೆ ಬೇಕಾದ ಕೆಲವು ಮುಖ್ಯವಾದ ವಸ್ತುಗಳನ್ನು ಖರೀದಿಸಬೇಕಾಗಿತ್ತು. ಇಬ್ಬರೂ ಕೂತು ಪಟ್ಟಿಯನ್ನು ತಯಾರು ಮಾಡಿದರು. ಶ್ರೀನಿವಾಸ ಮಾಂಗಲ್ಯ ಸರವನ್ನು ಬೆಳ್ಳಿಯ ಕಾಲುಂಗರವನ್ನು ಕೊಂಡು ತಂದ ಶಾರದಾ ಹೊಸ ಸೀರೆ, ಪಂಚೆ, ಶಲ್ಯ ಇತ್ಯಾದಿಗಳನ್ನು ಖರೀದಿಸಿದಳು.

ಮದುವೆಯ ಮುಹೂರ್ತವನ್ನು ಸಮೀಪದಲ್ಲಿದ್ದ ದೇವಸ್ಥಾನದ ಅರ್ಚಕರೊಬ್ಬರು ಗೊತ್ತು ಮಾಡಿಕೊಟ್ಟರು. ಆ ದಿನ ಬೆಳಿಗ್ಗೆ ಇಬ್ಬರೂ ತಲೆಗೆ ಸ್ನಾನ ಮಾಡಿದರು. ಹೊಸ ಬಟ್ಟೆಗಳನ್ನು ಧರಿಸಿ ದೇವಸ್ಥಾನಕ್ಕೆ ಬಂದರು. ಅರ್ಚಕರು ವಿಧಿಯುಕ್ತವಾಗಿ ಸರಳವಾಗಿ ವಿವಾಹ ವಿಧಿಯನ್ನು ನೆರವೇರಿಸಿ, ಶುಭವನ್ನು ಹಾರೈಸಿದರು. ಮಂಗಳಾರತಿ ಮಾಡಿ, ತೀರ್ಥ ಪ್ರಸಾದವನ್ನು ಕೊಟ್ಟು ಆಶೀರ್ವದಿಸಿದರು. ಜೊತೆಯಲ್ಲಿ ಬಂದಿದ್ದ ರಾಮಸ್ವಾಮಿ ಇಬ್ಬರನ್ನು ಅಭಿನಂದಿಸಿದ.

ಮನೆಗೆ ಬಂದ ನಂತರ, ಶಾರದಾ ಅಡಿಗೆ ಕೆಲಸದಲ್ಲಿ ತೊಡಗಿದಳು. ಶ್ರೀನಿವಾಸ ತಿಂಡಿ ತಿಂದು ತನ್ನ ಫ್ಯಾಕ್ಟರಿಗೆ ಹೊರಟು ಹೋದ. ಶಾರದಾ ಉತ್ತೇಜಿತಳಾಗಿದ್ದಳು. ತನ್ನ ಜೀವನದಲ್ಲಿನ ಮುಖ್ಯವಾದ ಈ ದಿನವನ್ನು ಸಂಭ್ರಮದಿಂದ ಸ್ವಾಗತಿಸಬೇಕೆಂದುಕೊಂಡಳು. ಶ್ಯಾವಿಗೆ ಪಾಯಸವನ್ನು ಹುಳಿಯನ್ನವನ್ನು ತಯಾರಿಸಿ, ಶ್ರೀನಿವಾಸನಿಗಾಗಿ ಕಾದಳು. ಅರ್ಧ ದಿನದ ರಜೆಯನ್ನು ಹಾಕಿ ಶ್ರೀನಿವಾಸ ಊಟದ ಹೊತ್ತಿಗೆ ಮನೆಗೆ ಬಂದ. ಶಾರದಾಳ ಮುಖದ ಮೇಲಿದ್ದ ಉತ್ಸಾಹವನ್ನು ಕೆಡಿಸಲು ಇಚ್ಛಿಸದೇ, ಮೆಲುನಗೆಯನ್ನು ನಕ್ಕು ಮೌನಿಯಾಗಿ ಒಳಬಂದ.

ಇಬ್ಬರೂ ಒಟ್ಟಿಗೇ ಊಟಕ್ಕೆ ಕುಳಿತರು. ಶಾರದಾ ತಾನು ಮಾಡಿದ್ದ ವ್ಯಂಜನಗಳನ್ನು ಬಡಿಸಿದಳು. ರುಚಿ ನೋಡಿ, ಶ್ರೀನಿವಾಸ ಚೆನ್ನಾಗಿದೆ ಅಂತಂದ. ಅವಳು ಮತ್ತಷ್ಟು ಬಡಿಸಿದಳು. ಊಟ ನಿತ್ಯಕ್ಕಿಂತ ರುಚಿಯಾಗಿದೆಯೆಂದೆನಿಸಿತ್ತು. ಆ ದಿನದ ಸಾಯಂಕಾಲವನ್ನು ಹೊರಗೆ ತಿರುಗಾಡಿ ಬಂದು ಕಳೆದರು.

ರಾತ್ರಿಯಾಗುತ್ತಿತ್ತು. ಶಾರದಾ ಸ್ವಲ್ಪ ಮಟ್ಟಿಗೆ ಆತಂಕಗೊಂಡಿದ್ದಳು. ಊಟದ ನಂತರ, ಹದವಾಗಿ ಬಿಸಿ ಮಾಡಿ ಸಕ್ಕರೆ ಬಾದಾಮಿ ಹಾಗಿದ್ದ ಹಾಲನ್ನು ಲೋಟಕ್ಕೆ ಹಾಕಿಕೊಂಡು, ಶಾರದಾ ಶ್ರೀನಿವಾಸನ ರೂಮಿಗೆ ಬಂದಳು. ಅವಳಿಗಾಗಿಯೇ ಕಾದಿದ್ದ ಶ್ರೀನಿವಾಸ ಅವಳನ್ನು, ಬಾಗಿಲಲ್ಲೇ ಸ್ವಾಗತಿಸಿ, ಕೈ ಹಿಡಿದು ಕರೆದು, ಮಂಚದ ಮೇಲೆ ಕೂರಿಸಿದ. ಶಾರದಾ ಲೋಟದ ಹಾಲನ್ನು ಸ್ವಲ್ಪ ತಾನು ಕುಡಿದು, ಉಳಿದುದನ್ನು ಅವನ ಕೈಗಿತ್ತಳು. ಅವನು ಹಾಲನ್ನು ಕುಡಿಯುತ್ತಾ ಅವಳನ್ನೇ ಗಮನಿಸಿದ. ಲಜ್ಜೆಯಿಂದ ಅವಳ ಮುಖ ಕೆಂಪಾಗಿತ್ತು. ಸಂಭ್ರಮದಿಂದ ತುಟಿಗಳು ಅದುರುತ್ತಿದ್ದವು. ಗಲ್ಲವನ್ನು ಹಿಡಿದೆತ್ತಿ ತನ್ನ ಕಡೆಗೆ ತಿರುಗಿಸಿಕೊಂಡು ಮುದ್ದಿಸಿದ. ಅವಳು ಮೆಲ್ಲನೆ ನಡುಗಿದಳು. ಅವನು ಅವಳನ್ನು ಆಲಂಗಿಸಿದ. ನಿಧಾನವಾಗಿ ಹಾಸಿಗೆಯ ಮಲಗಿಸಿ, ತನ್ನ ತುಟಿಗಳನ್ನು ಅವಳ ತುಟಿಗಳಿಗೆ ಸೇರಿಸಿದ. ಅವಳು ವಿರೋಧಿಸಲಿಲ್ಲ. ಅವನ ಉತ್ಸಾಹ ಹೆಚ್ಚಾಯಿತು. ಅವಳನ್ನು ತನ್ನವಳನ್ನಾಗಿಸಿಕೊಂಡ. ಅವಳು ಕನ್ಯೆಯಾಗಿಯೇ ಇರುವಳೆಂದು ತಿಳಿದು ಅವನಿಗೆ ಬಹಳ ಸಮಾಧಾನವಾಗಿತ್ತು.

ಅಂದಿನಿಂದ ಅವರ ದಾಂಪತ್ಯ ಜೀವನ ಪ್ರಾರಂಭವಾಗಿತ್ತು. ರಾತ್ರಿಯ ಹೊತ್ತು ಪ್ರೇಮ ಸಂಭಾಷಣೆ, ಸರಸ ಸಲ್ಲಾಪಗಳಿಂದ ಒಬ್ಬರನ್ನೊಬ್ಬರು ಅರಿಯುತ್ತಿದ್ದರು. ಹೀಗೇ ದಿನಗಳು ಕಳೆದವು. ಆದಿಶೇಷಯ್ಯನ ನೆನಪು ಮಾಸಿತು.

* * *

ಆದಿಶೇಷಯ್ಯ ತನ್ನ ಹತ್ತಿರದ ಸಂಬಂಧಿಗಳಾದ, ಕಾಂತಾ ಹಾಗೂ ರವಿಗೆ ಶಾರದಾ, ಶ್ರೀನಿವಾಸರನ್ನು ಹುಡುಕುವ ಕೆಲಸವನ್ನು ವಹಿಸಿದ್ದ. ಕಾಂತಾ ಆದಿಶೇಷಯ್ಯನ ತಂಗಿಯ ಮಗಳು. ಆದಿಶೇಷಯ್ಯನ ತಂಗಿ ಗಾಯತ್ರಿಯು ಗಣೇಶನನ್ನು ಪ್ರೀತಿಸಿ ಮದುವೆಯಾಗಿದ್ದಳು. ಅದಕ್ಕೆ ಮನೆಯವರ ಸಮ್ಮತವಿರಲಿಲ್ಲ. ಮದುವೆಯಾದ ವರ್ಷದೊಳಗೆ ಕಾಂತಾ ಹುಟ್ಟಿದ್ದಳು.

ಒಂದು ದಿನ ಇಬ್ಬರೂ ಸ್ಕೂಟರ್‌ನಲ್ಲಿ ಬರುತ್ತಿದ್ದಾಗ, ಎದುರಿಗೆ ಬಂದ ಲಾರಿಯೊಂದು ಡಿಕ್ಕಿ ಹೊಡೆದುದರ ಪರಿಣಾಮವಾಗಿ ಗಣೇಶ ಸ್ಥಳದಲ್ಲೇ ಸತ್ತು ಹೋಗಿದ್ದ. ಗಾಯತ್ರಿ ತಲೆಗೆ ಪೆಟ್ಟಾಗಿತ್ತು. ಆಸ್ಪತ್ರೆಗೆ ಸೇರಿದಳು. ವಿಷಯ ತಿಳಿದ ಆದಿಶೇಷಯ್ಯನ ತಂದೆ ತಾಯಿಯರಿಗೆ ವಿಪರೀತ ದುಃಖವಾಗಿತ್ತು. ಇದೇ ಕೊರಗಿನಲ್ಲಿ ಆದಿಶೇಷಯ್ಯನ ತಂದೆ ತಾಯಿಗಳು ಕೆಲವೇ ತಿಂಗಳುಗಳ ಅಂತರದಲ್ಲಿ ಇಬ್ಬರೂ ತೀರಿಹೋದರು. ಗಾಯತ್ರಿ ಸಹ ಬದುಕಿ ಉಳಿಯುವ ಸಂಭವವಿರಲಿಲ್ಲ. ಆದಿಶೇಷಯ್ಯನಿಗೆ, ತನ್ನ ಮಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೇಳಿ ವಚನವನ್ನು ತೆಗೆದುಕೊಂಡಿದ್ದಳು.

ಕಾಂತಾ ದೊಡ್ಡವಳಾದ ಮೇಲೆ ಆದಿಶೇಷಯ್ಯ ಅವಳ ಭಾಗದ ಆಸ್ತಿಯನ್ನು ಅವಳಿಗೆ ವಹಿಸಿಕೊಟ್ಟ. ಅವಳಿಗಾಗಿ ಗಂಡುಗಳನ್ನು ನೋಡಲಾರಂಭಿಸಿದ. ಆದರೆ ಕಾಂತಾ ಯಾವನೋ ಒಬ್ಬನೊಂದಿಗೆ ಸ್ನೇಹವನ್ನಿಟ್ಟುಕೊಂಡಿದ್ದಳು. ಅವರಿಬ್ಬರ ನಡುವೆ ದೇಹ ಸಂಬಂಧವೂ ಇತ್ತು. ಬಸುರಿಯಾದವಳು ಯಾರಿಗೂ ತಿಳಿಯದಂತೆ ಅಬಾರ್ಷನ್ ಮಾಡಿಸಿಕೊಂಡಿದ್ದಳು. ಈ ಘಟನೆಯ ನಂತರ ಕಾಂತಾಳಿಗೆ ಗಂಡಸರ ಮೇಲೆ ನಂಬಿಕೆಯಾಗಲೀ ಪ್ರೀತಿಯಾಗಲೀ ಇರಲಿಲ್ಲ.

ಆದಿಶೇಷಯ್ಯನ ಅಣ್ಣನ ಮಗ ರವಿಯನ್ನು ಆದಿಶೇಷಯ್ಯನೇ ಸಾಕಿಕೊಂಡಿದ್ದ. ಚಿಕ್ಕಪ್ಪನಂತೆ, ಅವನೂ ಬೆಳೆದು ಗೂಂಡಾಗಿರಿಯನ್ನು ಪ್ರಾರಂಭಿಸಿದ್ದ. ತನಗೆ ಬೇಕೆನಿಸಿದ ಹೆಂಗಸರನ್ನು ಬಲವಂತವಾಗಿ ಕಾಮಿಸಿ, ತನ್ನ ಕಾಮದಾಸೆಯನ್ನು ಪೂರೈಸಿಕೊಳ್ಳುತ್ತಿದ್ದ. ಆದಿಶೇಷಯ್ಯನಿಗೆ ರವಿಯ ಈ ಗುಣ ಇಷ್ಟವಾಗಿರಲಿಲ್ಲ. ಆದರೂ ವಿರೋಧಿಸದೇ ಸುಮ್ಮನಿದ್ದು ಬಿಟ್ಟಿದ್ದ. ಈಗ ರವಿಯ ಸಹಾಯವನ್ನು ಕೇಳಿದ. ಶಾರದಾ, ಶ್ರೀನಿವಾಸರನ್ನು ಹುಡುಕಲು ಆಳುಗಳನ್ನು ಕಳುಹಿಸು ಎಂದು ಹೇಳಿದ. ಹಾಗೇ ತಾನೇ ಕೆಲವು ಸ್ಥಳಗಳಿಗೆ ಹೋಗಿ ಪತ್ತೆ ಕಾರ್ಯವನ್ನು ಮಾಡಿದ. ಕೊನೆಗೂ ಅವನ ಪ್ರಯತ್ನ ಫಲಕಾರಿಯಾಯಿತು. ಕೆಂಗೇರಿಯ ಬಳಿ ಉಲ್ಲಾಳದಲ್ಲಿ ಶಾರದಾ ಶ್ರೀನಿವಾಸರು ವಾಸವಾಗಿರುವರೆಂದು ತಿಳಿದು ಬಂತು. ತಾನೇ ಹೋಗಿ ಅವರಿಬ್ಬರನ್ನು ಕೊಂದು ಬಿಡಬೇಕೆಂದುಕೊಂಡ. ಆದರೆ ಅದು ಸರಿಯೆನಿಸದೇ, ಕಾಂತಾ ಹಾಗೂ ರವಿಯರನೊಡನೆ ಮಾತನಾಡಿ, ಅವರುಗಳು ಹೋಗಿ ಬರಬೇಕೆಂದು ಹೇಳಿದ.

"ಶ್ರೀನಿವಾಸ ನಿಮ್ಮಿಬ್ಬರನ್ನು ಗುರುತು ಹಿಡಿಯುವುದಿಲ್ಲ. ಮೊದಲಿಗೆ ರಾಮಸ್ವಾಮಿಯನ್ನು ಭೇಟಿಯಾಗಿ ವಿಷಯವನ್ನು ತಿಳಿದುಕೊಳ್ಳಿ" ಎಂದು ಆದೇಶವನ್ನೀಡಿದ.

ರವಿ ಕಾಂತಾಳನ್ನು ಕರೆದುಕೊಂಡು ರಾಮಸ್ವಾಮಿಯ ಮನೆಗೆ ಬಂದ. "ಶಾರದಾ ಮತ್ತು ಶ್ರೀನಿವಾಸ ಎಲ್ಲಿದ್ದಾರೆ? ಹೇಳು" ಎಂದು ಜಬರ್ದಸ್ತಿನಿಂದ ಕೇಳಿದ.

ರಾಮಸ್ವಾಮಿ ಅನುಮಾನಗೊಂಡ. "ಶ್ರೀನಿವಾಸನಿಗೆ ನೀವಿಬ್ಬರೂ ಏನಾಗಬೇಕು" ಎಂದು ಅನುನಯದಿಂದಲೇ ಕೇಳಿದ.

"ನಾವು ಅವರ ದೂರದ ಸಂಬಂಧಿಗಳು. ಅವರಿಬ್ಬರನ್ನು ನೋಡಬೇಕೆಂದು ಬಂದಿದ್ದೇವೆ."

ರಾಮಸ್ವಾಮಿಗೆ ಸಂಶಯವಿದ್ದರೂ, ಹೆದರುತ್ತಲೇ ಶ್ರೀನಿವಾಸನ ಮನೆಯ ವಿಳಾಸವನ್ನು ಕೊಟ್ಟನು. ತಕ್ಷಣವೇ ಶ್ರೀನಿವಾಸನ ಮನೆಗೆ ಫೋನು ಮಾಡಿ ಮಾತಾಡಿದ.

ಶ್ರೀನಿವಾಸನನ್ನು ಹುಡುಕಿಕೊಂಡು ರವಿ, ಕಾಂತಾ ಎನ್ನುವವರು ಬಂದಿದ್ದರು. ಶ್ರೀನಿವಾಸನ ದೂರದ ಸಂಬಂಧಿಗಳೆಂದು ಹೇಳಿಕೊಂಡರು. ಆದರೂ ನನಗೆ ಏನೋ ಸಂಶಯ. ಅದಕ್ಕೆ ನಿಮಗೆ ತಿಳಿಸುತ್ತಿದ್ದೇನೆ. ಸ್ವಲ್ಪ ಹುಶಾರಾಗಿರಿ" ಎಂದ.

ಶಾರದಾ ಆತಂಕಗೊಂಡಳು. "ಯಾರೋ ರವಿ, ಕಾಂತಾ ಎನ್ನುವವರು ನಿಮ್ಮನ್ನು ಕೇಳಿಕೊಂಡು ರಾಮಸ್ವಾಮಿಯವರ ಮನೆಗೆ ಬಂದಿದ್ದರಂತೆ. ಯಾರವರು? ನಿಮಗೇನಾಗಬೇಕು? ಸಂಬಂಧಿಕರೆ?" ಶ್ರೀನಿವಾಸನನ್ನು ಕೇಳಿದಳು.

"ಯಾರೂ ಆ ಹೆಸರಿನವರು ನನ್ನ ಸಂಬಂಧಿಗಳಿಲ್ಲ. ಬಹುಶಃ ಆದಿಶೇಷಯ್ಯನ ಕಡೆಯವರಿರಬಹುದು."

"ಅವರಿಬ್ಬರೂ ಯಾವ ಸಮಯದಲ್ಲಾದರೂ ಬರಬಹುದು. ಯಾಕೆ ಬಂದಿದ್ದಾರೋ ಏನೋ ಈಗ ಏನು ಮಾಡೋಣ?"

"ನಮ್ಮಿಬ್ಬರನ್ನು ಮುಗಿಸಲೆಂದೇ ಆದಿಶೇಷಯ್ಯ ಅವರಿಬ್ಬರನ್ನು ಕಳಿಸಿರಬಹುದು. ಈ ರಾತ್ರಿ ಕಳೆಯುವುದರೊಳಗೆ ನಾವು ಈ ಮನೆಯನ್ನು ಬಿಟ್ಟು ಹೊರಟು ಹೋಗೋಣ."

"ಹಾಗೇ ಮಾಡೋಣ. ಅವರುಗಳು ಬೆಳಕಿನಲ್ಲಿ ಬರುವವರಲ್ಲ. ಕತ್ತಲಲ್ಲಿ ಬರುವವರು. ಬೆಳಗಾಗುವುದರೊಳಗೆ ಹೊರಟು ಬಿಡೋಣ."

ಇಬ್ಬರೂ ಬೇಗ ಬೇಗ ಊಟವನ್ನು ಮುಗಿಸಿ, ತಮ್ಮ ಬಟ್ಟೆಗಳನ್ನು ಸೂಟ್‌ಕೇಸ್‌ಗಳಿಗೆ ತುಂಬಿಕೊಂಡು, ಬೇಕಾದ ಕೆಲವು ಕಾಗದ ಪತ್ರಗಳನ್ನು ತೆಗೆದಿಟ್ಟುಕೊಂಡು ಸರಿಯಾದ ಸಮಯಕ್ಕಾಗಿ ಕಾಯುತ್ತಾ ಕುಳಿತಿದ್ದರು. ಅದೇ ವೇಳೆಗೆ ಮನೆಯ ಮುಂದೆ ಒಂದು ಆಟೋ ರಿಕ್ಷಾ ನಿಂತ ಸದ್ದು ಕೇಳಿಸಿತು. ಶ್ರೀನಿವಾಸ ಕತ್ತಲಲ್ಲೇ, ಕಿಟಕಿಯನ್ನು ಸ್ವಲ್ಪವೇ ಸರಿಸಿ ನೋಡಿದ. ಆಟೋದಿಂದ ಇಬ್ಬರು ಇಳಿಯುತ್ತಿರುವುದನ್ನು ಕಂಡು, ಲಗೇಜನ್ನು ಎತ್ತಿಕೊಂಡು ಹಿಂಬಾಗಿಲಿನ ಕಡೆಗೆ ಓಡಿದರು.

ಅಷ್ಟರಲ್ಲಿ ಗುಂಡಿನ ಸದ್ದು ಕೇಳಿಸಿತ್ತು. ಈ ಮೊದಲೇ ಮುಂಬಾಗಿಲಿಗೆ ಜಡಿದಿದ್ದ ಬೀಗ ಒಡೆದಿತ್ತು. ಬಾಗಿಲನ್ನು ತಳ್ಳಿಕೊಂಡು, ರವಿ ಕಾಂತಾ ಒಳಗೆ ಬರುವಷ್ಟರಲ್ಲಿ ಶಾರದಾ ಶ್ರೀನಿವಾಸ ಹೊರಬಾಗಿಲನ್ನು ದಾಟಿ, ಹೊರಗಿನಿಂದ ಚಿಲುಕವನ್ನು ಭದ್ರ ಪಡಿಸಿ ಕಾಲು ದಾರಿಯಲ್ಲಿ ಓಡುತ್ತಾ ಆಟೋ ಸ್ಟ್ಯಾಂಡಿನ ಬಳಿಗೆ ಬಂದರು. ಒಂದು ಆಟೋ ಹಿಡಿದು ಬಸ್‌ಸ್ಟ್ಯಾಂಡಿಗೆ ಬಂದರು. ಅಲ್ಲಿ ತಕ್ಷಣವೇ ಶಿವಮೊಗ್ಗಾ ಕಡೆಗೆ ಹೋಗುವ ಬಸ್ಸು ಇರಲಿಲ್ಲವಾದುದರಿಂದ, ಮತ್ತೆ ಆಟೋ ಹಿಡಿದು ಇಬ್ಬರೂ ರೈಲ್ವೇ ಸ್ಟೇಷನ್‌ಗೆ ಬಂದರು. ಅಲ್ಲಿಂದಲೇ ಅವಳು ರಾಮಸ್ವಾಮಿಗೆ ಫೋನು ಮಾಡಿ ತಕ್ಷಣವೇ ರೈಲ್ವೇ ಸ್ಟೇಷನ್‌ಗೆ ಬರಬೇಕೆಂದಳು.

ರಾಮಸ್ವಾಮಿ ಅವರಿಬ್ಬರಿಗಾಗಿ ಟಿಕೆಟ್‌ನ್ನು ಕೊಂಡು, ಅವರು ಕುಳಿತಿದ್ದ ಬೋಗಿಯನ್ನು ಹುಡುಕಿಕೊಂಡು ಬಂದು ಟಿಕೆಟನ್ನು ಕೊಟ್ಟು ಅವರಿಬ್ಬರಿಗೆ ಶುಭವನ್ನು ಹಾರೈಸಿ ಬೀಳ್ಕೊಟ್ಟನು. ರೈಲು ಇನ್ನೇನು ಹೊರಡುವುದರಲ್ಲಿತ್ತು. ಆ ಜನ ಜಂಗುಳಿಯ ನಡುವೆ ತೂರಿಕೊಂಡು ಬಂದ ರವಿ, ಶ್ರೀನಿವಾಸನಿಗೆ ಗುರಿ ಇಟ್ಟು ಗುಂಡನ್ನು ಹಾರಿಸಿದ. ಗುರಿ ಸ್ವಲ್ಪದರಲ್ಲಿ ತಪ್ಪಿ ಶ್ರೀನಿವಾಸನ ಬಲ ತೋಳಿಗೆ ಗುಂಡು ತಗುಲಿತು.

ಜನರ ಚೀರಾಟ ಪ್ರಾರಂಭವಾಯಿತು. ಅಲ್ಲಿಯೇ ಗಸ್ತು ತಿರುಗುತ್ತಿದ್ದ ಪೋಲೀಸರು ರವಿಯನ್ನು ಹಿಡಿದರು. ತಪ್ಪಿಸಿಕೊಂಡು ಓಡಿ ಹೋಗಲು ಯತ್ನಿಸುತ್ತಿದ್ದ ಕಾಂತಾಳನ್ನು ಜನರು ಅಡ್ಡಗಟ್ಟಿ ಹಿಡಿದರು. ಶ್ರೀನಿವಾಸನನ್ನು ಸಮೀಪದಲ್ಲೇ ಇದ್ದ ರೈಲ್ವೇ ಆಸ್ಪತ್ರೆಗೆ ಕರೆದೊಯ್ದರು. ಶ್ರೀನಿವಾಸನಿಗೆ ಪ್ರಥಮ ಚಿಕಿತ್ಸೆಯನ್ನು ನೀಡಿದರು. ಶ್ರೀನಿವಾಸ ಚೇತರಿಸಿಕೊಂಡ. ಶಾರದಾ ನಿರಾತಂಕಗೊಂಡಳು. ಮತ್ತೆ ಇಬ್ಬರೂ ರಾಮಸ್ವಾಮಿಯೊಂದಿಗೆ ತಮ್ಮ ಮನೆಗೆ ಬಂದರು.

* * *

ರವಿ, ಕಾಂತಾರನ್ನು ಕೋರ್ಟಿನಲ್ಲಿ ಹಾಜರು ಪಡಿಸಿದರು. ವಿಚಾರಣೆಗಳು ಪ್ರಾರಂಭವಾಗಿದ್ದವು. ರವಿ. ಆದಿಶೇಷಯ್ಯನೇ ಈ ಕೃತ್ಯಗಳ ಹಿಂದಿರುವ ವ್ಯಕ್ತಿ ಎಂದು ತಿಳಿಸಿದ. ಆದಿಶೇಷಯ್ಯನನ್ನು ಬಂಧಿಸಿದರು. ಇಬ್ಬರಿಗೂ ಜೈಲು ಶಿಕ್ಷೆಯಾಯಿತು. ಕಾಂತಾ ಬಿಡುಗಡೆಯಾಗಿ ಬಂದಳು.

ಆದಿಶೇಷಯ್ಯ ಅವಮಾನಿತನಾಗಿದ್ದ. ತಾನು ಕಟಕಟೆಯಲ್ಲಿ ನಿಲ್ಲಬೇಕಾಗಬಹುದೆಂದೂ, ಶ್ರೀನಿವಾಸ ತನ್ನ ವಿರುದ್ಧ ಸಾಕ್ಷಿ ಹೇಳುವನೆಂದು ಅವನು ಅಂದುಕೊಂಡಿರಲಿಲ್ಲ. ಆದಿಶೇಷಯ್ಯ ಕಲಬೆರಕೆಯ ಔಷಧಗಳನ್ನು ಮಾರಾಟ ಮಾಡುತ್ತಿದ್ದುದನ್ನು ಶ್ರೀನಿವಾಸ ಪತ್ತೆ ಹಚ್ಚಿದ್ದ. ಶ್ರೀನಿವಾಸ ಆದಿಶೇಷಯ್ಯನ ಔಷಧಿಯ ಫ್ಯಾಕ್ಟರಿಯಲ್ಲೇ ಕೆಲಸಕ್ಕಿದ್ದ.

ತನ್ನ ಅವ್ಯವಹಾರ ಶ್ರೀನಿವಾಸನಿಗೆ ತಿಳಿದಿದೆ ಎನ್ನುವುದು ಆದಿಶೇಷಯ್ಯನಿಗೆ ಗೊತ್ತಾಗಿ ಅವನನ್ನು ಕರೆಸಿ ಬೆದರಿಕೆಯನ್ನು ಹಾಕಿದ. ಈ ವಿಷಯವನ್ನು ಪೋಲೀಸರಿಗಾಗಲೀ ಇನ್ಯಾರಿಗಾಗಲೀ ತಿಳಿಸಿದರೆ, ಹೆಂಡತಿಯನ್ನು, ಮಗುವನ್ನು ಕೊಂದು ಬಿಡುವುದಾಗಿ ಕೊಲೆ ಬೆದರಿಕೆಯನ್ನು ಹಾಕಿದ್ದ ಎಂದು ತಿಳಿಸಿದ.

"ಮತ್ತೆ ನೀನೇ ನಿನ್ನ ಹೆಂಡತಿಯನ್ನು ಕೊಂದ ಆರೋಪ ನಿನ್ನ ಮೇಲೆ ಇತ್ತಲ್ಲ?"

ಅದು ಸುಳ್ಳು. ಆದಿಶೇಷಯ್ಯನ ಅವ್ಯವಹಾರ, ಒಂದು ದಿನ ಇಡೀ ಫ್ಯಾಕ್ಟರಿಯ ಕಾರ್ಮಿಕರಿಗೆ ತಿಳಿಯಿತು. ಭಾರಿ ಗಲಾಟೆ ನಡೆದು, ಪೋಲಿಸರು ಬಂದು ಫ್ಯಾಕ್ಟರಿಯನ್ನು ಮುಚ್ಚಿಸಿದರು. ಇದಕ್ಕೆಲ್ಲಾ ನಾನೇ ಕಾರಣ ಎಂದುಕೊಂಡ ಆದಿಶೇಷಯ್ಯ ನನ್ನ ಕಣ್ಣೆದುರೇ ನನ್ನ ಹೆಂಡತಿಯನ್ನು ಒದ್ದು, ಚಿತ್ರಹಿಂಸೆ ಮಾಡಿ ಸಾಯಿಸಿದ. ಆಗ ಅವಳು ಗರ್ಭಿಣಿಯಾಗಿದ್ದಳು. ನಂತರ ಆದಿಶೇಷಯ್ಯ ಪೋಲಿಸರಿಗೆ ದುಡ್ಡು ತಿನ್ನಿಸಿ, ಸುಳ್ಳು ಸಾಕ್ಷಿಗಳನ್ನು ಸೃಷ್ಟಿಸಿ, ನಾನೇ ನನ್ನ ಹೆಂಡತಿಯ ಸಾವಿಗೆ ಕಾರಣನೆಂದು ಹೇಳಿ, ನನ್ನನ್ನು ಪೋಲಿಸರಿಗೆ ಒಪ್ಪಿಸಿದ. ಕೇಸು ನಡೆದು, ನಾನು ಕೆಲವಾರು ವರ್ಷಗಳು ಜೈಲಿನಲ್ಲಿ ಕಳೆಯಬೇಕಾಗಿ ಬಂತು" ಎಂದು ನಡೆದುದನ್ನು ತಿಳಿಸಿದ.

ಆದಿಶೇಷಯ್ಯನಿಗೆ ಜೈಲು ಶಿಕ್ಷೆಯಾದುದು ಶ್ರೀನಿವಾಸನಿಗೆ ಸಮಾಧಾನವಾಗಿತ್ತು. ತನ್ನ ಮೇಲೆ ಹರಡಿದ್ದ ಕರಾಳ ಛಾಯೆ ದೂರವಾದುದು ನೆಮ್ಮದಿಯನ್ನುಂಟು

ಮಾಡಿತ್ತು. ಆದರೂ ಇಷ್ಟೆಲ್ಲಾ ಹಗರಣ ನಡೆದ ಮೇಲೆ ಶಾರದಾಳ ಮನಸ್ಸು ಬದಲಾಗಿ, ಪ್ರೀತಿ ಕಡಿಮೆಯಾಗಿ ಬಿಟ್ಟರೇ ಎಂಬ ಅನುಮಾನವೂ ಕಾಡಲಾರಂಭಿಸಿತು. ಕೆಲವು ವಿಚಾರಗಳನ್ನು ಶಾರದಾಳಿಗೆ ಹೇಳುವುದೇ ವಾಸಿ ಎನಿಸಿತು. ಸಮಯ ಕಾದು ಒಂದು ದಿನ ವಿಷಯವನ್ನು ತೆಗೆದ.

"ನಿನಗೆ, ನನ್ನ ಶಾಂತಾಳ ಮದುವೆಯ ದಿನ ನೆನಪಿನಲ್ಲಿದೆಯಾ?"

ಶಾರದಾ ಹೌದು ಎಂದು ತಲೆಯಾಡಿಸಿದಳು. ಆ ದಿನ ನಡೆದ ಘಟನೆ ಅವಳಿಗೆ ನೆನಪಾಗಿತ್ತು. ಶ್ರೀನಿವಾಸ ಶಾಂತಾಳ ಮದುವೆಗೆ, ಶಾರದಾ ತನ್ನ ತಂದೆ ತಾಯಿ, ಚಿಕ್ಕಪ್ಪ ಚಿಕ್ಕಮ್ಮರೊಂದಿಗೆ ಬಂದಿದ್ದಳು. ಮದುವೆಯ ಕಲಾಪಗಳೆಲ್ಲಾ ಮುಗಿದ ಮೇಲೆ ಆಹ್ವಾನಿತರೆಲ್ಲಾ ವಧೂ ವರರಿಗೆ ಉಡುಗೊರೆಯನ್ನು ಕೊಟ್ಟು ಶುಭವನ್ನು ಕೋರಿದರು. ಶಾರದಾ ಸಹ ಶಾಂತಾಳಿಗೆ ಉಡುಗೊರೆಯನ್ನಿತ್ತು, ನಿಮ್ಮಿಬ್ಬರಿಗೂ ಸುಖಮಯ ದಾಂಪತ್ಯದ ಶುಭಾಶಯಗಳು" ಎಂದು ಹಾರೈಸಿದಳು. ಉಡುಗೊರೆಯನ್ನು ಕೈಗೆತ್ತಿಕೊಂಡ ಶಾಂತಾ ವಿಲಕ್ಷಣವಾಗಿ ನಕ್ಕಿದ್ದನ್ನು ಶ್ರೀನಿವಾಸ ನೋಡಿದ. ಶ್ರೀನಿವಾಸನಿಗೆ ಆ ನಗು ಹಿಡಿಸಲಿಲ್ಲ. ತೀರ ಬಾಲಿಶವಾಗಿ ಕಂಡಿತ್ತು. ಶಾರದಾಳ ಕಡೆ ನೋಡಿದ. ಅವಳು ಅತಿ ಗಂಭೀರವಾಗಿದ್ದಳು. ಅವನನ್ನು ಪಾಪ ಪ್ರಜ್ಞೆ ಕಾಡತೊಡಗಿತ್ತು. ಮತ್ತೆ ಅವಳ ಕಡೆ ನೋಡುವ ಧೈರ್ಯ ಬರಲಿಲ್ಲ.

ಆ ರಾತ್ರಿ ದಂಪತಿಗಳಿಗೆ ಮೊದಲ ರಾತ್ರಿ. ಹಾಲಿನ ಲೋಟದೊಂದಿಗೆ ಶಾಂತಾ ಕೋಣೆಯೊಳಗೆ ಬಂದಾಗ ಅವನ ಗಮನ ಅವಳ ಕಡೆಗೆ ತಿರುಗಿತು. ಹಾಲಿನ ಲೋಟವನ್ನು ಅವನ ಮುಂದೆ ನಿರುತ್ಸಾಹದಿಂದ ಹಿಡಿದಳು. ಅವನು ಹಾಲನ್ನು ಅರ್ಧ ಕುಡಿದು, ಉಳಿದುದನ್ನು ಅವಳ ಕೈಗಿತ್ತ. ಅವಳ ಮುಖದ ಮೇಲೆ ಅಸಹನೆಯ ಗೆರೆಗಳು ಮೂಡಿದ್ದವು. ಅವಳನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿದ. ಅವನ ಆಲಿಂಗನ ಅವಳಲ್ಲಿ ಯಾವ ರೋಮಾಂಚನವನ್ನುಂಟು ಮಾಡಿರಲಿಲ್ಲ ಎನ್ನುವುದು ಅವಳ ಪ್ರತಿಕ್ರಿಯೆಯಿಂದ ಗೊತ್ತಾಗಿತ್ತು. ಕತ್ತಲಲ್ಲಿ ಅವಳ ಮುಖದ ಮೇಲಿನ ಭಾವನೆಯನ್ನು ಗುರುತಿಸಲಾಗಿರಲಿಲ್ಲ. ಆದರೂ, ಮೊದಲ ರಾತ್ರಿ, ತನ್ನ ಹಕ್ಕು ಎಂಬಂತೆ, ಅವಳನ್ನು ತನ್ನ ಬಾಹು ಬಂಧನಗಳಲ್ಲಿ ಬಂಧಿಸಿ, ತನ್ನ ಅಧಿಕಾರವನ್ನು ಚಲಾಯಿಸಿ, ಅವಳ ಯೌವನವನ್ನು ಸೂರೆಗೊಂಡು, ಸುಖವನ್ನು ಅನುಭವಿಸಿದ.

ಶಾಂತಾ ಯಾವುದೇ ಭಾವನೆಯನ್ನು ತೋರ್ಪಡಿಸದೇ, ನಿರ್ಲಿಪ್ತಳಂತೆ ಅವನಿಗೆ ತನ್ನನ್ನು ಒಪ್ಪಿಸಿಕೊಂಡಿದ್ದಳು. ಆ ಮೊದಲ ಮಿಲನ ಶ್ರೀನಿವಾಸನಿಗೆ ತೃಪ್ತಿಯನ್ನು ನೀಡಿರಲಿಲ್ಲ. ಅಸಹನೆಯಿಂದ ಅವಳಿಂದ ದೂರವಾಗಿ ಮಲಗಿದ. ಅವಳೂ ಒಂದು ಪಕ್ಕಕ್ಕೆ ತಿರುಗಿ ಮಲಗಿ ಬಿಟ್ಟಳು.

ಶ್ರೀನಿವಾಸ ಬೆಳಿಗ್ಗೆ ಹೊತ್ತಾಗಿ ಎದ್ದ. ಶಾಂತಾ ಎದ್ದು ಹೊರಟು ಹೋಗಿದ್ದಳು. ಅವನಿಗೆ ಪಿಚ್ಚೆನ್ನಿಸಿತ್ತು. ಎದ್ದು ಮುಖ ತೊಳೆದು ಹೊರ ಬಂದ. ಶಾಂತಾ ಅಡಿಗೆ ಮನೆಯಲ್ಲಿದ್ದಳು. ಇವನು 'ಶಾಂತಾ' ಎಂದು ಕರೆದರೂ ಅವಳು ತಿರುಗಿ ನೋಡಿರಲಿಲ್ಲ.

ಅವಳ ತಾಯಿಯೇ, ಅವಳ ಕೈಗೆ ಕಾಫಿಯ ಕಪ್ಪನ್ನಿತ್ತು "ಹೋಗು ನಿನ್ನ ಯಜಮಾನರಿಗೆ ಕಾಫಿ ಕೊಡು" ಎಂದು ಕಳಿಸಿದ್ದಳು.

ಶಾಂತಾಳ ವರ್ತನೆ ವಿಚಿತ್ರವೆನಿಸಿತ್ತು. ಬೇಸರವನ್ನು ಹುಟ್ಟಿಸುತ್ತಿತ್ತು. ಗಂಡನ ಬಗ್ಗೆ ಯಾವ ಆಸಕ್ತಿಯೂ ಇರಲಿಲ್ಲ. ಸರಸ ಸಂಭಾಷಣೆಗಳಿಲ್ಲ. ಪ್ರೇಮ ಸಲ್ಲಾಪಗಳಿಲ್ಲ. ಯಾವ ಸಹಜ ವರ್ತನೆಯೂ ಇದ್ದಂತಿರಲಿಲ್ಲ. ಬಲವಂತಕ್ಕೆ ಮದುವೆಯಾದವಳಂತೆ ವರ್ತಿಸುತ್ತಿದ್ದಳು. ಅವನಿಗೆ ಕೆಲವೇ ದಿನಗಳಲ್ಲಿ ಅವಳ ಬಗ್ಗೆ ಜಿಗುಪ್ಸೆ ಉಂಟಾಗಿತ್ತು. ಆದರೆ ಎಲ್ಲವೂ ಯಾಂತ್ರಿಕವಾಗಿ ನಡೆದುಕೊಂಡು ಹೋಗುತ್ತಿತ್ತು.

ಶಾಂತ ಗರ್ಭಿಣಿ ಎಂದು ತಿಳಿದಾಗ ಶ್ರೀನಿವಾಸ ಸಂತಸಗೊಂಡಿದ್ದ. ಈಗಲಾದರೂ ಶಾಂತಾಳ ವರ್ತನೆ ಬದಲಾಗಬಹುದು ಎಂದು ನಿರೀಕ್ಷಿಸಿದ. ಆದರೆ ಹಾಗಾಗಲಿಲ್ಲ. ಅವಳನ್ನು ದೂರ ಎಲ್ಲಾದರೂ ಕರೆದುಕೊಂಡು ಹೋದರೆ, ತಮ್ಮಿಬ್ಬರ ಸಂಬಂಧ ನಿಕಟವಾಗಬಹುದೆಂದು ಕೊಂಡು ಬೇರೆ ಊರಿಗೆ ಕರೆದೊಯ್ದ. ಆದರೂ ಹೆಚ್ಚು ಬದಲಾವಣೆ ಕಂಡು ಬರಲಿಲ್ಲ. ಅವಳು ತನ್ನ ಆರೋಗ್ಯದ ಬಗ್ಗೆ ಹೆಚ್ಚು ಗಮನ ಕೊಡುತ್ತಿರಲಿಲ್ಲ. ಅದು ಅವನಿಗೆ ಆತಂಕವನ್ನುಂಟು ಮಾಡಿತ್ತು.

ಇದೇ ಸಮಯದಲ್ಲಿ ಆದಿಶೇಷಯ್ಯನ ವೈರತ್ವ ಬೆಳೆದಿತ್ತು. ಆದಿಶೇಷಯ್ಯ ಬೆದರಿಕೆಯನ್ನು ಹಾಕಿದ್ದ. ಆದರೂ ಕಾರ್ಮಿಕರ ದೊಂಬಿಯಿಂದ ಫ್ಯಾಕ್ಟರಿ ಮುಚ್ಚಿತ್ತು. ಆದಿಶೇಷಯ್ಯನ ಮೇಲೆ ಕೇಸು ನಡೆಯುತ್ತಿತ್ತು. ಈ ರೋಷದಿಂದ ಆದಿಶೇಷಯ್ಯ ಪರ ಊರಿನಲ್ಲಿದ್ದ ಶ್ರೀನಿವಾಸನ ಮನೆಗೆ ಗೂಂಡಾಗಳೊಡನೆ ನುಗ್ಗಿದ. ಗೂಂಡಾಗಳು ಶ್ರೀನಿವಾಸನನ್ನು ಹಿಡಿದರು. ಆದಿಶೇಷಯ್ಯ ಶಾಂತಾಳನ್ನು ಒದ್ದೂ ಒದ್ದೂ ಸಾಯಿಸಿದ. ನಂತರ ಶ್ರೀನಿವಾಸನನ್ನೇ ಜೈಲಿಗೆ ಕಳಿಸಿದ್ದ.

ಶಾರದಾ ತನ್ನ ವಕೀಲ ವೃತ್ತಿಯನ್ನು ಪ್ರಾರಂಭಿಸಿದ್ದಳು. ಹೆಸರಾಂತ ಅಡ್ವೋಕೇಟ್‌ರವರ ಸಲಹೆಯನ್ನು ತೆಗೆದುಕೊಂಡು ಅನೇಕ ಕೇಸುಗಳನ್ನು ಗೆದ್ದು ಪ್ರಖ್ಯಾತಳಾಗುತ್ತಾ ಬಂದಳು. ಶ್ರೀನಿವಾಸನ ಕೇಸ್ ಬಗ್ಗೆ ಬಂದ ವರದಿಗಳನ್ನು ಓದುತ್ತಿದ್ದಳು. ಶ್ರೀನಿವಾಸ ನಿರಪರಾಧಿ ಇರಬಹುದೆಂಬ ನಂಬಿಕೆ ಬಲವಾಗತೊಡಗಿತು. ಎಲ್ಲಾ ವಿಷಯಗಳನ್ನು ಸಂಗ್ರಹಿಸಿ, ಸಾಕ್ಷ್ಯಾಧಾರಗಳನ್ನಿಟ್ಟುಕೊಂಡು, ತನ್ನ ಸ್ವಂತ ಇಚ್ಛೆಯಿಂದ ಅವನ ಕೇಸ್‌ನ್ನು ಮತ್ತೆ ಓಪನ್ ಮಾಡಿಸಿದಳು. ಶ್ರೀನಿವಾಸನ ವಿರುದ್ಧ ಸಾಕ್ಷಿ ಹೇಳಿದ್ದವರನ್ನು ಮರು ವಿಚಾರಣೆ ಮಾಡಿ ನಿಜವನ್ನು ಬಹಿರಂಗ ಪಡಿಸಿದ್ದಳು. ಶ್ರೀನಿವಾಸನಿಗೆ ಬಿಡುಗಡೆ ಸಿಗುವಂತೆ ವಾದಿಸಿ ಗೆದ್ದಿದ್ದಳು...

* * *

ಆದಿಶೇಷಯ್ಯ ಶಾಂತಾಳನ್ನು ನಿಷ್ಕರುಣೆಯಿಂದ ಒದ್ದು ಹಿಂಸಿಸುತ್ತಿದ್ದಾಗ, ಅವಳು ನೋವನ್ನನುಭವಿಸುತ್ತಾ, ನನ್ನ ಕಡೆ ಬೀರುತ್ತಿದ್ದ ಅಸಹಾಯಕ ನೋಟವೇ ನನ್ನ ಕಣ್ಣ ಮುಂದೆ ಬರುತ್ತಿತ್ತು... ಆ ನೆನಪು ಎಷ್ಟು ಘೋರ ! ಶ್ರೀನಿವಾಸ ನುಡಿದ.

"ನಿಮ್ಮದು ಯಾವುದೂ ತಪ್ಪಲ್ಲ ಶ್ರೀನಿವಾಸ್. ಅದನ್ನು ಒಂದು ಕೆಟ್ಟ ನೆನಪು ಎಂದು ಪರಿಗಣಿಸಿದರೆ, ಅದರ ತೀವ್ರತೆ ಕಡಿಮೆಯಾಗಲು ಸಾಧ್ಯ" ಶಾರದಾ ಹೇಳಿದಳು.

"ನಿನಗೆ ನನ್ನ ಮೇಲೆ ಇಷ್ಟು ಪ್ರೀತಿ ಇದೆ ಅಂತ ನನಗೆ ಗೊತ್ತೇ ಇರಲಿಲ್ಲ ಶಾರದಾ"

"ಪ್ರೀತಿಯ ಆಳವೇ ಹಾಗೆ" ಶಾರದಾ ನಗುತ್ತಾ ನುಡಿದಿದ್ದಳು.

"ಸಧ್ಯದಲ್ಲೇ ನೀನು ತಾಯಿಯಾಗಲಿದ್ದೀಯೆಂದು ರಾಮಸ್ವಾಮಿಗೆ ತಿಳಿಸಿ ಕಾಗದ ಬರೆದಿದ್ದೀನಿ" ಶ್ರೀನಿವಾಸನ ಮಾತಿಗೆ ಶಾರದಾ ಮುಗುಳ್ನಕ್ಕಳು. ಅದೇ ರಾತ್ರಿ ಶಾರದಾ ಗಂಡು ಮಗುವಿಗೆ ತಾಯಿಯಾದಳು. ಶ್ರೀನಿವಾಸ ತಂದೆಯಾದ.

* *

## ಅಂಗೀಕಾರ

ಸುಹಾಸ–ಕಾವೇರಿಯ ಮದುವೆ ನೆರವೇರಿ ಕೆಲವೇ ದಿನಗಳಾಗಿದ್ದವು. ಸುಹಾಸ ಶ್ರೀಮಂತರ ಮನೆಯ ಯುವಕ. ಯಾವುದೇ ದುರಾಭ್ಯಾಸಗಳಿರಲಿಲ್ಲ. ಆದರೂ ನಿತ್ರಾಣ ದೇಹದವನಂತೆ ತೆಳ್ಳಗಿದ್ದ. ತನ್ನ ದೇಹಸ್ಥಿತಿಯ ಅರಿವು ಅವನಿಗಿತ್ತು. ಆದರೆ ಏನನ್ನೂ ಮಾಡಲಾಗದೇ ಇದ್ದುದಕ್ಕೆ ಖಿನ್ನತೆಯ ಭಾವವೂ ಇತ್ತು.

ಕಾವೇರಿಯೂ ಶ್ರೀಮಂತ ಕುಟುಂಬದವಳೇ. ಬಹಳ ಚುರುಕಾಗಿದ್ದಳು. ಉತ್ಸಾಹದಿಂದ ಪ್ರತಿಯೊಂದು ಕೆಲಸವನ್ನೂ ಮಾಡುವ ಹುಮ್ಮಸ್ಸು ಅವಳಲ್ಲಿತ್ತು. ಅವಳಿಗೆ ಓದಿನಲ್ಲಿ ಆಸಕ್ತಿ ಇತ್ತು. ಮದುವೆಯಾಗುವ ಆಸೆ ಇರಲಿಲ್ಲ. ಮೆಡಿಕಲ್ ಕಡೇ ವರ್ಷದಲ್ಲಿ ಓದುತ್ತಿದ್ದವಳಿಗೆ, ಅವಳ ತಂದೆ ಅವಳ ಇಷ್ಟಕ್ಕೆ ವಿರುದ್ಧವಾಗಿ ಸುಹಾಸನೊಡನೆ ಅವಳ ಮದುವೆಯನ್ನು ನೆರವೇರಿಸಿದ್ದರು.

ಸುಹಾಸನಿಗೆ ತಾಯಿ ಇರಲಿಲ್ಲ. ತಂದೆ ಶ್ರೀಪತಿರಾಯರು ಹೆಂಡತಿಯನ್ನು ಕಳೆದುಕೊಂಡು ಕೆಲವಾರು ವರ್ಷಗಳೇ ಕಳೆದು ಹೋಗಿದ್ದವು. ಮತ್ತೆ ಮದುವೆಯಾಗುವ ಮನಸ್ಸು ಅವರಿಗಿರಲಿಲ್ಲ. ಮಗ ಚಿಕ್ಕವನೆಂದು, ಅವನನ್ನು ನೋಡಿಕೊಳ್ಳಲು ಅವರ ತಂಗಿ ಸುಲೋಚನಾಳನ್ನು ತಮ್ಮ ಮನೆಯಲ್ಲೇ ಇರಿಸಿಕೊಂಡಿದ್ದರು.

ಸುಲೋಚನಳಿಗೆ ಅಣ್ಣನ ಆಸ್ತಿಯ ಬಗ್ಗೆ ಚಿಂತೆ. ಮಗು ಸುಹಾಸನ ಬಗ್ಗೆ ಯಾವ ಚಿಂತೆಯೂ ಇರಲಿಲ್ಲ. ಊಟ, ತಿಂಡಿ, ಹಾಲು, ಹಣ್ಣುಗಳನ್ನು ಕೊಡುವ ವಿಷಯದಲ್ಲಿ ಜಿಪುಣತನವನ್ನು ತೋರುತ್ತಿದ್ದಳು. ಸ್ವಾರ್ಥತನದಿಂದ ತನ್ನ ಪರ್ಸನ್ನು ತುಂಬಿಸಿಕೊಳ್ಳುತ್ತಿದ್ದಳು. ಎಷ್ಟೋ ದಿನಗಳವರೆಗೆ ಶ್ರೀಪತಿರಾಯರಿಗೆ ಈ ವಿಷಯ ಗೊತ್ತಾಗಲೇ ಇಲ್ಲ. ತಂಗಿಯ ಕೆಟ್ಟ ಬುದ್ಧಿ ತಿಳಿದ ದಿನ ಆತ ಬಹಳ ನೊಂದುಕೊಂಡರು. ಅವಳ ಸ್ವಾರ್ಥತನ ಜಿಗುಪ್ಸೆಯನ್ನುಂಟು ಮಾಡಿತು. ಕರೆದು ತಂದಿದ್ದ ತಪ್ಪಿಗೆ ಒಂದಿಷ್ಟು ಹಣವನ್ನು ಕೊಟ್ಟು, ಮತ್ತೆ ತಮ್ಮ ಮನೆಯ ಕಡೆ ಸುಳಿಯಬಾರದೆಂದು ಬೈದು ಕಳಿಸಿದ್ದರು.

ನಂತರ ಒಬ್ಬ ಕೆಲಸದ ಹೆಂಗಸನ್ನು, ಸುಹಾಸನನ್ನು ನೋಡಿಕೊಳ್ಳಲೆಂದು ಗೊತ್ತು ಮಾಡಿಕೊಂಡರು. ಆಕೆಯ ಹೆಸರು ಸುಂದರಮ್ಮ ಆಕೆಯೂ ಸ್ವಾರ್ಥಿಯೇ. ತನ್ನ ಹೊಟ್ಟೆ ತುಂಬಿಸಿಕೊಳ್ಳಲು ಬಂದಂತಿತ್ತು. ಶ್ರೀಪತಿರಾಯರ ಎದುರಿಗೆ ಸುಹಾಸನನ್ನು ಮುದ್ದಾಡಿ, ಬಾಟಲಿ ತುಂಬಾ ಹಾಲನ್ನು ಕುಡಿಸುತ್ತಿದ್ದಳು. ಇಲ್ಲದಿದ್ದರೆ ಸುಹಾಸನಿಗೆ

ಉಪವಾಸವೇ. ಸುಹಾಸ ಕೃಶನಾಗಿದ್ದ. ಆಕೆ ಮೈ ಕೈ ತುಂಬಿಕೊಂಡು ಹಸಲಿಗೆ ತಕ್ಕಂತೆ ಸುಂದರಳಾದಳು. ಶ್ರೀಪತಿರಾಯರಿಗೆ ಅನುಮಾನ ಬಂದು, ಆಕೆಯ ಚಲನ ವಲನಗಳ ಮೇಲೆ ಗಮನವನ್ನಿಟ್ಟರು. ಗುಟ್ಟು ಹೊರಬಿದ್ದಿತು. ಆಕೆಯನ್ನು ಮನೆಯಿಂದಾಚೆ ಕಳಿಸಿದರು.

ಆ ನಂತರ ಚೆಲುವಿ ಎಂಬಾಕೆಯನ್ನು ನೇಮಕ ಮಾಡಿಕೊಂಡರು. ಅವಳು ಚಿಕ್ಕವಳು. ಹೊಸದಾಗಿ ಮದುವೆಯಾಗಿದ್ದವಳು. ಅವಳ ಗಂಡ ಸಿಪ್ಪಾ ಕೂಡ ಇಲ್ಲೇ ಬಂದು ಇರತೊಡಗಿದ. ಅವರ ಸರಸ ಸಲ್ಲಾಪಗಳಿಗೆ, ದೇಹದ ಹಸಿವು ತೀರಿಸಿಕೊಳ್ಳಲು ಹೆಚ್ಚು ಸಮಯ ವ್ಯಯವಾಗುತ್ತಿತ್ತು. ಇದು ತಿಳಿದ ದಿನ ಶ್ರೀಪತಿರಾಯರಿಗೆ ಅಸಹ್ಯವಾಯಿತು. ಅವರಿಬ್ಬರಿಗೂ ಬುದ್ಧಿಯನ್ನು ಹೇಳಿ, ಬೈದು ಮನೆಯಿಂದಾಚೆ ಓಡಿಸಿದರು.

ಆ ಮೇಲೆ, ಬೇರೆ ಕೆಲಸದವರನ್ನು ನೋಡಿಕೊಳ್ಳುವ ಮನಸ್ಸಾಗಲಿಲ್ಲ. ತಾವೇ ಮಗುವನ್ನು ಸಾಕುವುದಾಗಿ ನಿರ್ಣಯಿಸಿದರು. ಮಗುವಿನ ಲಾಲನೆ, ಪೋಷಣೆ ಕುರಿತ ಪುಸ್ತಕಗಳನ್ನು ತಂದು, ಓದಿಕೊಂಡು ಅದರಂತೆ ನಡೆಯುತ್ತಿದ್ದರು. ಅದು ಸ್ವಲ್ಪ ಮಟ್ಟಿಗೆ ಪ್ರಯೋಜನಕ್ಕೆ ಬಂದಿತು. ಆದರೂ ಸುಹಾಸನ ಮೈ ಕೈ ತುಂಬಿಕೊಳ್ಳಲಿಲ್ಲ. ಡಾಕ್ಟರ ಬಳಿಗೆ ಕರೆದುಕೊಂಡು ಹೋದರು. ಅವರು ಮಕ್ಕಳ ತಜ್ಞರ ಬಳಿಗೆ ಕರೆದೊಯ್ಯುವ ಸಲಹೆಯನ್ನು ನೀಡಿದರು.

ಮಗುವಿನ ತೂಕ, ಎತ್ತರ, ಬೆಳವಣಿಗೆ ಎಲ್ಲವನ್ನು ಕೂಲಂಕುಷವಾಗಿ ಪರೀಕ್ಷಿಸಿದ ಡಾಕ್ಟರು, "ಇವನಿಗೆ ಪೌಷ್ಟಿಕಾಂಶಗಳ, ಖನಿಜದ ಕೊರತೆ ಇದೆ. ದೇಹದಲ್ಲಿ ಶಕ್ತಿಯಿಲ್ಲ. ಇದೇನೂ ದೊಡ್ಡ ಸಮಸ್ಯೆ ಅಲ್ಲ. ಪೌಷ್ಟಿಕಾಂಶಗಳು ಹೆಚ್ಚು ಇರುವ ಆಹಾರವನ್ನು ಹೆಚ್ಚು ಹೆಚ್ಚು ಕೊಡುವುದೇ ಸೂಕ್ತ ಪರಿಹಾರ. ನಾನು ಒಂದು ಡಯಟ್ ಚಾರ್ಟ್‌ನ್ನು ಕೊಡ್ತೀನಿ. ಅದರ ಪ್ರಕಾರ ಹೊತ್ತು ಹೊತ್ತಿಗೆ ಆಹಾರ ಕೊಟ್ಟರೆ, ನಿಧಾನವಾಗಿ ಸರಿ ಹೋಗ್ತಾನೆ" ಎಂದು ಸಲಹೆಯನ್ನು ನೀಡಿದರು.

ಅದರಂತೆಯೇ ಶ್ರೀಪತಿರಾಯರು ಹಾಲು, ರಾಗಿ ಮಾಲ್ಟ್, ಬೇಯಿಸಿದ ತರಕಾರಿ, ಹಣ್ಣಿನ ರಸಗಳನ್ನು ಕ್ರಮಬದ್ಧವಾಗಿ ಕೊಡುತ್ತಾ ಬಂದರು. ಕೆಲವೇ ತಿಂಗಳುಗಳಲ್ಲಿ ಸುಹಾಸ ತಕ್ಕಮಟ್ಟಿಗೆ ಸುಧಾರಿಸಿದ. ಆದರೆ ದೃಢಕಾಯನಾಗಲಿಲ್ಲ.

ಬೆಳೆದು ದೊಡ್ಡವನಾದ ಮೇಲೆ, ವಿದ್ಯಾಭ್ಯಾಸಕ್ಕಾಗಿ ಬೇರೆ ಊರಿಗೆ ಹೋಗಬೇಕಾಗಿ ಬಂತು. ಅಲ್ಲಿ ಹೊತ್ತು ಹೊತ್ತಿಗೆ ಊಟ ತಿಂಡಿಯ ಬಗ್ಗೆ ಗಮನ ಹರಿಸಲು ತಂದೆ ಜೊತೆಯಲ್ಲಿರಲಿಲ್ಲ. ಅಲ್ಲದೇ ಓದು ಬರಹದ ನಡುವೆ ಊಟ ತಿಂಡಿಗಳ ಬಗ್ಗೆ ಹೆಚ್ಚಿನ ಮಹತ್ವ ಕೊಡಲಾಗುತ್ತಿರಲಿಲ್ಲ. ಈ ಬಗ್ಗೆ ಶ್ರೀಪತಿರಾಯರಿಗೆ ಆತಂಕವಿದ್ದೇ ಇದ್ದಿತು. ಅವನ ವಿದ್ಯಾಭ್ಯಾಸ ಮುಗಿಯುತ್ತಿದ್ದಂತೆ ಮಗನನ್ನು ವಾಪಸ್ಸು ಮನೆಗೆ ಬರುವಂತೆ ಪದೇ ಪದೇ ಕಾಗದ ಬರೆಯುತ್ತಿದ್ದರು. ತಂದೆಯ ಆತಂಕದ ಅರಿವು ಅವನಿಗಿತ್ತು. ಕಾಲೇಜಿಗೆ ರಜ ಸಿಕ್ಕಿದ ಕೂಡಲೇ ಊರಿಗೆ ವಾಪಸ್ಸಾದ.

ಹೀಗೇ ಅವನ ವ್ಯಾಸಂಗ ಮುಂದುವರೆಯಿತು. ಡಿಗ್ರಿಯ ನಂತರ ಅವನು ತನ್ನ ಊರಿನಲ್ಲೇ ಕೆಲಸಕ್ಕೆ ಪ್ರಯತ್ನ ಮಾಡಿದ. ಶ್ರೀಪತಿರಾಯರಿಗೆ ಮಗನಿಗೆ ಆದಷ್ಟು ಬೇಗ ಮದುವೆ ಮಾಡಿ, ಸೊಸೆಯ ಕೈಗೆ ಮಗನನ್ನು ಒಪ್ಪಿಸಬೇಕೆಂಬ ಆಕಾಂಕ್ಷೆ ಹುಟ್ಟಿತು. ಹೆಣ್ಣುಗಳನ್ನು ನೋಡಲಾರಂಭಿಸಿದ್ದರು. ಸುಹಾಸನಿಗೆ ಮದುವೆಯ ಬಗ್ಗೆ ಆಸಕ್ತಿ ಇರಲಿಲ್ಲ. ತನ್ನನ್ನು ಯಾವ ಹೆಣ್ಣೂ ಒಪ್ಪಲಾರಳು ಎಂದೇ ಭಾವಿಸಿದ್ದ. ತಂದೆಗೆ ಸರಿಯಾಗಿ ಉತ್ತರಿಸುತ್ತಿರಲಿಲ್ಲ. ಆದರೆ ಶ್ರೀಪತಿರಾಯರು ಹಿಂದೆಗೆಯಲಿಲ್ಲ. ಪ್ರಯತ್ನವನ್ನು ಮುಂದುವರೆಸಿದರು. ಕಾವೇರಿಯೇ ಸುಹಾಸನಿಗೆ ತಕ್ಕವಳು ಎಂದು ನಿರ್ಧರಿಸಿ, ಮದುವೆಯನ್ನು ಗೊತ್ತು ಮಾಡಿದರು.

ಅವಳು ಮೆಡಿಕಲ್ ಸ್ಟೂಡೆಂಟ್ ಎಂದು ತಿಳಿದಾಗ ಸಂತಸವಾಗಿತ್ತು. ಕಾವೇರಿಯ ತಂದೆ, ಸುಹಾಸನ ಶ್ರೀಮಂತಿಕೆ ಮಗಳ ಪ್ರಾಕ್ಟೀಸ್‌ಗೆ ಸಹಾಯಕವಾಗುತ್ತದೆಂದು ಒಪ್ಪಿಕೊಂಡರು. ಕಾವೇರಿ ತಂದೆಯ ಮಾತಿಗೆ ಇಲ್ಲವೆನ್ನಲಾಗದೇ ಒಪ್ಪಿದ್ದಳು. ಆದರೆ ನಿರಾಸಕ್ತಿ ಅವಳಲ್ಲಿ ತುಂಬಿತ್ತು.

ಅದ್ದೂರಿಯಾಗಿ ಮದುವೆ ನೆರವೇರಿತು. ಶ್ರೀಪತಿರಾಯರು ಮಗ ಸೊಸೆಯನ್ನು ಹನಿಮೂನ್‌ಗೆ ಕಳಿಸುವ ಸಿದ್ಧತೆ ಮಾಡಿದ್ದರು. ಏರ್‌ಪೋರ್ಟ್‌ನಲ್ಲಿ ಕಾಯುತ್ತಾ ಕುಳಿತಿದ್ದಾಗ, ಸುಹಾಸನಿಗೆ ಇದ್ದಕ್ಕಿದ್ದಂತೆ ಹೊಟ್ಟೆನೋವು ಪ್ರಾರಂಭವಾಯಿತು. ತಡೆಯಲಾರದಷ್ಟು ಹೆಚ್ಚಾದಾಗ, ಕಾವೇರಿಯ ಕಡೆ ತಿರುಗಿದ. ಕಾವೇರಿ ಏನನ್ನೋ ಯೋಚಿಸುತ್ತಾ ಕುಳಿತಿದ್ದಳು.

"ಕಾವೇರಿ, ನನಗ್ಯಾಕೋ ತುಂಬಾ ಹೊಟ್ಟೆ ನೋಯ್ತಾ ಇದೆ"

ಮೊದಲಿಗೆ ಅವಳು ತಮಾಷೆ ಎಂಬಂತೆ ಸುಮ್ಮನಿದ್ದಳು. ಆದರೆ ಅವನು ಮತ್ತೆ ಹೇಳಿದಾಗ, ಅವನ ಕಡೆ ನೋಡಿ ನುಡಿದಳು.

"ಟಾಯ್ಲೆಟ್ಟಿಗೆ ಹೋಗಿ ಬನ್ನಿ..." ಸುಹಾಸ ಸಂಕೋಚಗೊಂಡರೂ, ಅವಳು ಹೇಳಿದಂತೆ, ಟಾಯ್ಲೆಟ್ ಎಲ್ಲಿದೆ ಅಂತ ವಿಚಾರಿಸಿಕೊಂಡು ಹೋಗಿ ಬಂದ. ಹೊಟ್ಟೆ ಹಗುರವಾಗಿತ್ತು. ತನಗ್ಯಾಕೆ ಈ ವಿಷಯ ಹೊಳೆಯಲಿಲ್ಲ! ಅವಳೇನೆಂದು ಕೊಂಡಿರಬಹುದು! ಅವಳ ಗಮನ ಸೆಳೆದು ಮಾತನಾಡಲು ತಾನು ಹೀಗೆ ಹೇಳಿರಬಹುದು ಅಂತಂದುಕೊಂಡರೇ...? ಅವನಿಗೆ ನಾಚಿಕೆಯಾಗಿತ್ತು. ಮತ್ತೆ ಮಾತನಾಡುವ ಗೋಜಿಗೆ ಹೋಗಲಿಲ್ಲ.

"ನೀವು ನನ್ನ ಗಮನ ಸೆಳೆಯಲು ಹೊಟ್ಟೆ ನೋವಿನ ಕಾರಣವನ್ನು ಹೇಳಿದಿರಾ?" ಇದ್ದಕ್ಕಿದ್ದಂತೆ ಅವಳು ಕೇಳಿದಾಗ ಅವನು ತಬ್ಬಿಬ್ಬಾದ.

"ಇಲ್ಲ, ಹಾಗೇನಿಲ್ಲ. ನಿಜವಾಗ್ಲೂ ಹೊಟ್ಟೆ ನೋಯ್ತಿತ್ತು. ಈಗ ಹಾಯಾಗಿದೆ. ಅವನು ಸಂಕೋಚದಿಂದ ನುಡಿದಾಗ ಅವಳಿಗೆ ರೇಗಿತ್ತು. ಇಂಥವನನ್ನು ತಾನು ಪ್ರೀತಿಸಲು ಸಾಧ್ಯವೇ? ತನಗೆ ತಾನೇ ಪ್ರಶ್ನಿಸಿಕೊಂಡಳು.

ಅವರು ಬಾಂಬೆಯನ್ನು ತಲುಪಿ ಹೋಟೆಲ್ಲೊಂದರಲ್ಲಿ ಇಳಿದುಕೊಂಡಿದ್ದರು. ಹೊಸಜಾಗ, ಹೊಸ ಪರಿಸರ, ಮನಸ್ಸಿನ ಮುಜುಗರದಿಂದ ಸುಹಾಸ ಒಂದು ರೀತಿಯಲ್ಲಿ ಬಳಲಿದ್ದ. ಅವನಿಗೆ ಅಲ್ಲಿಯ ಊಟ ಸೇರಿರಲಿಲ್ಲ. ಹೊಟ್ಟೆ ತುಂಬದೇ ಇದ್ದುದರಿಂದ ನಿದ್ದೆ ಕೂಡಾ ಹತ್ತಿರಕ್ಕೆ ಸುಳಿದಿರಲಿಲ್ಲ. ಕಾವೇರಿಗೆ ಅವನ ತಳಮಳ ವಿಚಿತ್ರವೆನಿಸಿತ್ತು. ಅವನ ಬಗ್ಗೆ ಮರುಕ ಹುಟ್ಟಿತು. ಅವನ ಬಗ್ಗೆ ಯೋಚಿಸಿದಳು. ಅವನನ್ನು ತಾನು ಸುಧಾರಿಸಲೆಂದೇ, ಶ್ರೀಪತಿರಾಯರು ತನ್ನನ್ನು ಆಯ್ಕೆ ಮಾಡಿರುವರೆಂದು ಹೊಳೆಯಿತು. ಕಾವೇರಿ ತನ್ನ ಪರಿಚಯದ ತಜ್ಞ ಡಾಕ್ಟರೊಬ್ಬರ ಬಳಿಗೆ ಕರೆದೊಯ್ದಳು. ಅವರು ಅವನನ್ನು ಕೂಲಂಕುಷವಾಗಿ ಪರೀಕ್ಷಿಸಿ, ಅವನ ಇತಿಹಾಸವನ್ನೆಲ್ಲಾ ತಿಳಿದುಕೊಂಡರು. ಅವನಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಕೇಳಿದರು. ಅವನ ಇಷ್ಟಾನಿಷ್ಟಗಳ ಬಗ್ಗೆ ಚರ್ಚಿಸಿದರು.

"ಚಿಕ್ಕ ವಯಸ್ಸಿನಿಂದಲೂ, ಪೌಷ್ಟಿಕತೆಯ ಕೊರತೆಯಿಂದ, ದೇಹದ ಬೆಳವಣಿಗೆ ಕುಂಠಿತವಾಗಿದೆ. ಹಾಗಾಗಿ ಕೀಳರಿಮೆ ಉಂಟಾಗಿದೆ. ಈಗ ಹೇಗೂ ನೀನು ಅವನ ಪತ್ನಿಯಾಗಿರುವುದರಿಂದ, ಅವನ ಯೋಗಕ್ಷೇಮ ನಿನ್ನದು" ಎಂದು ಮುಗುಳ್ನಗುತ್ತಾ ನುಡಿದಾಗ ಅವಳು ಧೈರ್ಯಗೊಂಡಳು. ಅವರು ಕೊಟ್ಟ ಸಲಹೆಗಳನ್ನು ಅನುಸರಿಸುವುದೇ ಸರಿಯಾದ ಮಾರ್ಗ ಎಂದುಕೊಂಡಳು. ಅವನಿಗಾಗಿ ಕೆಲವು ವಸ್ತುಗಳನ್ನು ಮೆಡಿಕಲ್ ಸ್ಟೋರ್‌ನಿಂದ ಖರೀದಿಸಿದಳು. ಹೋಟೆಲ್ಲಿನ ಮ್ಯಾನೇಜರ್ ಹತ್ತಿರ ಮಾತನಾಡಿ, ಸುಹಾಸನ ತಿಂಡಿ, ಊಟಗಳಲ್ಲಿ ಕೆಲವು ಮಾರ್ಪಾಡುಗಳು ಬೇಕೆಂದು ಕೇಳಿಕೊಂಡಳು.

ಆ ರಾತ್ರಿ, ಊಟದ ಸಮಯದಲ್ಲಿ ರೂಮ್ ಸರ್ವೀಸ್‌ನವರು ಸುಹಾಸನಿಗಾಗಿ ಬೇರೆಯೇ ವ್ಯಂಜನಗಳಿದ್ದ ಊಟವನ್ನು ತಂದಿತ್ತರು. ಟೇಬಲ್ ಬಳಿ ತನಗಾಗಿ ಕಾಯುತ್ತಾ ಕುಳಿತಿದ್ದ ಕಾವೇರಿಯನ್ನು ಕಂಡು ಅವನಿಗೆ ಖುಷಿಯಾಗಿತ್ತು. ಕುಳಿತ ನಂತರ, ಊಟದ ತಟ್ಟೆಗೆ ಮುಚ್ಚಿದ್ದ ಕವರನ್ನು ತೆಗೆದ. ಮುಖ ಸಪ್ಪಗಾಗಿತ್ತು. ಅವಳ ಕಡೆ ಕಳ್ಳ ನೋಟ ಬೀರಿದ. ಅವಳು ಮುಗುಳ್ನಕ್ಕು ಮೃದುವಾಗಿ ನುಡಿದಳು.

"ಇವೆಲ್ಲಾ ನಿಮಗಾಗಿಯೇ. ನೀವು ನಿಶ್ಶಕ್ತಿಯಿಂದ ಬಳಲುತ್ತಿದ್ದೀರಿ. ಆದ್ದರಿಂದ ನಿಮಗೆ ಸಹಜವಾದ ಜೀವನವನ್ನು ನಡೆಸಲಾಗುತ್ತಿಲ್ಲ. ಈ ಡಯಟ್‌ನ್ನು ಅನುಸರಿಸುವುದರಿಂದ ನಿಮ್ಮ ದೇಹದ ಶಕ್ತಿ ಹೆಚ್ಚುತ್ತದೆ. ಮನಸ್ಸು ಉಲ್ಲಾಸಗೊಳ್ಳುತ್ತದೆ. ಇದರಿಂದ ನಿಮಗೇ ಒಳ್ಳೆಯದು.

ಕಾವೇರಿಯ ಮಾತಿಗೆ ಬೇಸರಗೊಳ್ಳದೇ ಸುಹಾಸ ತನಗೆ ಸೇರಿದಷ್ಟನ್ನು ತಿಂದ. ಹಾಲನ್ನು ಕುಡಿದು ಹಣ್ಣುಗಳನ್ನು ತಿಂದ. ಅವನು ಬಲವಂತವಾಗಿ, ತನ್ನ ಮಾತನ್ನು ಧಿಕ್ಕರಿಸಲಾಗದೇ ತಿನ್ನುತ್ತಿದ್ದಾನೆಂದು ಅವಳಿಗೆ ತಿಳಿಯಿತು. 'ಗುಡ್' ಎಂದಳು ಅವನ ಕಡೆ ನೋಡಿ. ಅವನು ಹಣ್ಣಿನ ತಟ್ಟೆಯನ್ನು ಅತ್ತ ತಳ್ಳಿ ಹಾಸಿಗೆಯ ಮೇಲೆ ಮಲಗಿದ. ಕಾವೇರಿ ಹಣ್ಣಿನ ತಟ್ಟೆಯನ್ನು ಎತ್ತಿಕೊಂಡು ಬಂದು, ಅವನ ಮಗ್ಗುಲಲ್ಲಿ ಕುಳಿತಳು. 'ಇದಿಷ್ಟನ್ನು ಮುಗಿಸಿ ಬಿಡಿ. ಇದನ್ನು ನಿಮಗಾಗಿಯೇ ತಂದಿದೀನಿ" ಎಂದಳು. ಅವನು ಎದ್ದು ಕುಳಿತ.

"ನೀನು ತಿನ್ನಿಸುವುದಾದರೆ ನಾನು ತಿಂತೀನಿ" ಎಂದ ತುಂಟನಂತೆ.

"ಸರಿ ನಾನೇ ತಿನ್ನಿಸುತ್ತೇನೆ" ಎನ್ನುತ್ತಾ ಅವಳು, ಹಣ್ಣಿನ ಹೋಳುಗಳನ್ನು ನಿಧಾನವಾಗಿ ತಿನ್ನಿಸಿದಳು. ತಟ್ಟೆ ಖಾಲಿಯಾಯಿತು.

"ಹೊಟ್ಟೆ ಭಾರ ಆಯ್ತು. ನಂಗೆ ನಿದ್ದೆ ಬರ್ತಿಲ್ಲ" ಎಂದ ಚಿಕ್ಕ ಮಗುವಿನಂತೆ. ಅವನ ತುಂಟಾಟ ಅವಳಿಗೆ ಬೇಸರವನ್ನು ತಂದರೂ ಸಹಿಸಿಕೊಂಡಳು.

"ನನ್ನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿ, ನಾನು ತಟ್ಟಿ ತಟ್ಟಿ ಮಾಡ್ತೀನಿ. ಬೇಗ ನಿದ್ದೆ ಬರುತ್ತೆ" ಅವನು ಅವಳ ತೊಡೆಗಳ ಮೇಲೆ ತಲೆಯಿಟ್ಟು ಅವಳ ಕಡೆ ನೋಡಿದ. ಅವನಿಗೆ ತಂದೆಯ ನೆನಪಾಗಿತ್ತು. ಅವಳ ಕೈಗಳು ಅವನ ಹಣೆಯ ಮೇಲೆ ತಾಳಬದ್ಧವಾಗಿ ಆಡತೊಡಗಿತ್ತು. ಅವನು ಕಣ್ಣು ಮುಚ್ಚಿದ. ತಂದೆ ಹೀಗೇ ಚಿಕ್ಕ ವಯಸ್ಸಿನಲ್ಲಿ ತನ್ನನ್ನು ತಟ್ಟಿ ಮಲಗಿಸುತ್ತಿದ್ದರು ಎಂದು ನೆನಪಿಸಿಕೊಂಡ. ನಿದ್ದೆ ಅವನನ್ನು ಆವರಿಸಿಕೊಂಡಿತು.

ಕಾವೇರಿ ಅವನ ತಲೆಯನ್ನು ತೊಡೆಯಿಂದ ಕೆಳಗಿಳಿಸಿ, ಅವನನ್ನು ಸರಿಯಾಗಿ ಮಲಗಿಸಿ, ಹೊದಿಸಿದಳು. ಅಷ್ಟಾದರೂ, ಅವನು ತನ್ನ ಗಂಡ, ಅವನ ಮನಸ್ಸಿನ ಆಸೆ ಏನಿರಬಹುದು ಎಂದು ತಿಳಿಯುವ ತವಕ ಅವಳಲ್ಲಿ ಹುಟ್ಟಲಿಲ್ಲ.

ಕಾವೇರಿಯ ಈ ಆರೈಕೆ ಸುಹಾಸನಿಗೆ ಇಷ್ಟವಾಯಿತು. ಅವಳನ್ನೇ ಪ್ರತಿಯೊಂದಕ್ಕೂ ಪೀಡಿಸುತ್ತಿದ್ದ. ಅವಳು ಸಮೀಪದಲ್ಲಿ ಹೆಚ್ಚು ಹೆಚ್ಚು ಹೊತ್ತು ಇರಲಿ ಎಂದು ಬಯಸುತ್ತಿದ್ದ. ಅವಳನ್ನು ಪ್ರೀತಿಯಿಂದ ನೋಡುತ್ತಿದ್ದ. ದಿನದಿನಕ್ಕೂ ಖಿನ್ನತೆ ಕಡಿಮೆಯಾಗತೊಡಗಿತು. ಉಲ್ಲಾಸ ಹೆಚ್ಚಾಗತೊಡಗಿತು. ದೇಹದ ಬಯಕೆಗಳು ಜಾಗೃತವಾಗತೊಡಗಿದವು. ಆದರೆ ತಾನಾಗಿಯೇ ಹೇಗೆ ಕೇಳುವುದು? ಅವಳಾಗಿಯೇ ಯಾಕೆ ತಿಳಿದುಕೊಳ್ಳಬಾರದು? ಎಂದು ಒಂದೆರಡು ದಿನಗಳು ಕಾದ.

ಸುಹಾಸನನ್ನೇ ಗಮನಿಸುತ್ತಿದ್ದ ಕಾವೇರಿಗೆ ಅವನ ಮನದಿಂಗಿತ ಅರ್ಥವಾಗಿತ್ತು. ಅವನಾಗಿಯೇ ಮುಂದುವರೆಯಲಿ ಎಂದು ಬಯಸಿದಳು. ಒಂದು ದಿನ ಹೀಗೇ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿರುವಾಗ ಕಣ್ಣು ಮುಚ್ಚಿ ನುಡಿದ.

"ಕಾವೇರಿ, ಮದುವೆಯಾಗಿ ಇಷ್ಟು ದಿನಗಳಾಗಿವೆ. ನನ್ನಾಸೆ ಏನು ಅಂತ ನಿನಗಿನ್ನು ತಿಳಿಲಿಲ್ವಾ...? ಅಥವಾ ನನ್ನ ಮೇಲೆ ನಿನಗೆ ಪ್ರೀತಿ ಇಲ್ವಾ?"

ಕಾವೇರಿ ನಕ್ಕಿದ್ದು ಕೇಳಿಸಿ ಕಣ್ಣು ಬಿಟ್ಟ. ಅವಳು ಅವನ ಮುಖದ ಮೇಲೆ ಬಾಗಿದಳು. "ಇದುವರೆಗೂ ನೀವೇ ಯಾಕೆ ಕೇಳಲಿಲ್ಲ?"

"ನಿನಗೆ ಇಷ್ಟವಿಲ್ಲದಿರಬಹುದು ಅಂತ ಅಂದುಕೊಂಡಿದ್ದೆ"

"ಹೌದು, ಮದುವೆಯಾದ ಹೊಸದರಲ್ಲಿ ನನಗೆ ನಿಮ್ಮ ಬಗ್ಗೆ ಯಾವ ಆಸಕ್ತಿಯೂ ಇರಲಿಲ್ಲ. ಈಗ ನಿಮ್ಮ ಜೊತೆಯಲ್ಲಿ ಹೆಚ್ಚು ಹೆಚ್ಚು ಹೊತ್ತು ಇದ್ದು ನಾನು ನಿಮ್ಮನ್ನು ಅರಿತಿದ್ದೇನೆ. ನಾನೂ ನಿಮ್ಮನ್ನು ಪ್ರೀತಿಸುತ್ತಿದ್ದೇನೆ."

"ಕಾವೇರಿ, ನಾನು ಎಷ್ಟಾಗಲೀ, ಸ್ವಲ್ಪ ಪೆದ್ದು. ನೀನಾದರೆ ಡಾಕ್ಟರಾಗುವವಳು. ಜಾಣೆ.... ನೀನೇ ಹೇಳಬಹುದಾಗಿತ್ತಲ್ಲ."

"ನಾನು ಹೆಂಗಸು... ನನಗೆ ನಾಚಿಕೆ ಜಾಸ್ತಿ. ನಿಮ್ಮ ಈ ಆಸೆಗೆ ನಾನು ಇಲ್ಲ ಎನ್ನಲಾರೆ. ನಾನು ನಿಮ್ಮವಳು..." ಎನ್ನುತ್ತಾ ಅವನ ತುಟಿಗಳನ್ನು ಮುದ್ದಿಸಿದಳು.

ಸುಹಾಸ ಅವಳನ್ನು ತನ್ನೆಡೆಗೆ ಎಳೆದುಕೊಂಡ. ಆ ರಾತ್ರಿ ಅದ್ಭುತವಾಗಿದೆ ಎಂದು ಎನಿಸಿತು. ತೃಪ್ತಿಯಿಂದ ಅವಳನ್ನು ಆಲಂಗಿಸಿಕೊಂಡ. ಹನಿಮೂನ್ ಸೊಗಸಾಗಿತ್ತು.

ಅವರಿಬ್ಬರೂ ಅಷ್ಟು ದೀರ್ಘಕಾಲ ಹನಿಮೂನ್‌ಗೆ ಹೋಗಿರುವರೆಂದು ಶ್ರೀಪತಿರಾಯರಿಗೆ ಅಸಂತೋಷವೇನೂ ಇರಲಿಲ್ಲ. ಆದರೆ ಮಗನ ಬಗ್ಗೆ ಸ್ವಲ್ಪ ಆತಂಕ ಇತ್ತು. ಅವರಿಬ್ಬರ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಅವರಿಬ್ಬರೂ ವಾಪಸ್ಸು ಬಂದ ದಿನ ಅವರ ಹೃದಯ ನಿರಾಳವಾಗಿತ್ತು. ಮಗನನ್ನೇ ಪರೀಕ್ಷಿಸುವವರಂತೆ ನೋಡಿದರು. ಅವನು ಗೆಲುವಾಗಿದ್ದುದನ್ನು ಕಂಡು ಸಮಾಧಾನವಾಗಿತ್ತು. ಸೊಸೆಯನ್ನು ವಿಶ್ವಾಸದಿಂದ ನೋಡಿ ಮಾತನಾಡಿಸಿದರು. ಮಗ ಸೊಸೆ ಅನ್ಯೋನ್ಯವಾಗಿರುವರೆಂದು ಅರಿತು. ತಮಗೆ ಇನ್ನಾವ ಚಿಂತೆಯೂ ಇಲ್ಲ ಎಂದುಕೊಂಡರು.

ಊಟದ ಸಮಯವಾದರೂ ಮಗ ಸೊಸೆ ರೂಮಿನಲ್ಲೇ ಇರುವುದು. ಅತಿ ಎನಿಸಿತ್ತು. ಬಾಗಿಲನ್ನು ತಟ್ಟಿದರು. ಕಾವೇರಿ. ಗಂಡನನ್ನು ಎಬ್ಬಿಸಿದಳು.

"ನಿಮ್ಮ ತಂದೆ ಬಾಗಿಲನ್ನು ಬಡೀತಾ ಇದಾರೆ" ಇಬ್ಬರೂ ಹೊರಬಂದರು.

"ಊಟದ ಹೊತ್ತಾಯ್ತಲ್ಲಮ್ಮ ಅದಕ್ಕೇ ಬಾಗಿಲು ಬಡಿದೆ"

"ಪರವಾಗಿಲ್ಲ ಬಿಡಿ ಮಾವ..." ಕಾವೇರಿ ಸುಹಾಸನ ಕಡೆ ಕಳ್ಳ ನೋಟ ಬೀರಿದಳು. ಅವನು ಕಣ್ಣು ಹೊಡೆದು ನಕ್ಕಿದ್ದ. ಅವರ ಚೆಲ್ಲಾಟ ಅವರಿಗೆ ಪ್ರಿಯವೆನಿಸಿತ್ತು.

"ಡ್ಯಾಡೀ, ಕಾವೇರಿ ಫೈನಲ್ ಇಂಟರ್ ಮುಗಿಸಬೇಕು ಅಂತ ಇದಾಳೆ. ನೀವೇನಂತೀರಿ?.." ಊಟ ಮಾಡುತ್ತಾ ಕೇಳಿದ. ಅವನ ನಿಷ್ಠೆ ಅವರಿಗೆ ಹಿಡಿಸಿತು.

"ಧಾರಾಳವಾಗಿ ಓದಲಿ.. ನಿನಗೇನೂ ತೊಂದರೆ ಇಲ್ಲದಿದ್ದರೇ..."

"ಇಲ್ಲ, ಡ್ಯಾಡೀ.. ನಾನೀಗ ಸಾಕಷ್ಟು ಬೆಳೆದಿದ್ದೀನಿ. ತಿಳುವಳಿಕಸ್ಥನಾಗಿದ್ದೀನಿ. ನಿಮ್ಮಿಂದ, ಕಾವೇರಿಯಿಂದ ನಾನು ಸಾಕಷ್ಟು ಕಲಿತಿದ್ದೀನಿ. ನನಗೆ ಏನೂ ತೊಂದರೆ ಯಾಗುವುದಿಲ್ಲ. ಕಾವೇರಿಯ ಆಸೆಯನ್ನು ಪೂರೈಸುವುದು ನನ್ನ ಧರ್ಮ."

"ಭಲೇ, ಸುಹಾಸ್! ನಾನು ನಿನ್ನಿಂದ ನಿರೀಕ್ಷಿಸಿದ್ದು ಇದನ್ನೇ. ನೀನೀಗ ನಿಜಕ್ಕೂ ಬೆಳೆದಿದ್ದೀಯ. ಕಾವೇರಿಯಂಥ ಹೆಂಡತಿ ಸಿಕ್ಕಿರುವುದು ನಿನ್ನ ಅದೃಷ್ಟ. ನೀವಿಬ್ಬರೂ ಸುಖವಾಗಿರುವುದೇ ನನಗೆ ಮುಖ್ಯ" ಮಗನ ಬೆನ್ನನ್ನು ತಟ್ಟಿದರು.

* * *

ಸುಹಾಸನ ಸಹಕಾರದಿಂದ ಕಾವೇರಿ. ಡಾ॥ ಕಾವೇರಿಯಾಗಿದ್ದಳು. ಮನೆಯಲ್ಲೇ ಕ್ಲಿನಿಕ್‌ನ್ನು ಪ್ರಾರಂಭಿಸುವ ಆಲೋಚನೆಯನ್ನು ಸುಹಾಸನಿಗೆ ಹೇಳಿದಳು. ಮಗನ ಮಾತಿಗೆ ಇಲ್ಲವೆನ್ನಲಾಗದೇ ಶ್ರೀಪತಿರಾಯರು ಒಪ್ಪಿಗೆಯನ್ನಿತ್ತರು. ಕೆಲವೇ ದಿನಗಳಲ್ಲಿ ಕ್ಲಿನಿಕ್ ಪ್ರಾರಂಭವಾಯಿತು.

ಕಾವೇರಿ, ಕ್ಲಿನಿಕ್‌ಗೆ ಬರುವ ಪೇಶೆಂಟ್ಸ್‌ಗಳನ್ನಲ್ಲದೇ, ಮನೆಯ ಕಡೆಗೂ ಆಸಕ್ತಿಯನ್ನು ವಹಿಸುತ್ತಿದ್ದಳು. ಸುಹಾಸ ಕೆಲಸದಿಂದ ಬರುವ ಹೊತ್ತಿಗೆ. ಅವನಿಗಾಗಿ ಸಿದ್ಧಳಾಗಿರುತ್ತಿದ್ದಳು. ಮಾವನ ಊಟ ಉಪಚಾರಗಳ ಕಡೆ ಗಮನ ಹರಿಸುತ್ತಿದ್ದಳು. ಶ್ರೀಪತಿರಾಯರು ಧನ್ಯನಾದೆ ಎಂದುಕೊಂಡರು. ತೃಪ್ತಿಯಿಂದ ಅವನ ಹೃದಯ ನಕ್ಕಿತು. ಹೆಂಡತಿಯ ಫೋಟೋ ಕಡೆ ನೋಟ ಹರಿಯಿತು.

* *

# ಸನ್ಯಾಸಿಯ ಕೊಡುಗೆ

ಶಶಿರೇಖಾಳಿಗೆ ತಾನು ಮಾಡುತ್ತಿದ್ದ ಪಾಠದ ಮೇಲೆ ಆಸಕ್ತಿಯೇ ಇರಲಿಲ್ಲ. ಯಾಂತ್ರಿಕವಾಗಿ ಅಟೆಂಡೆನ್ಸ್ ತೆಗೆದುಕೊಂಡು ಪಾಠವನ್ನು ಪ್ರಾರಂಭಿಸಿದ್ದಳು. ಬೆಲ್ ಆದರೆ ಸಾಕೆಂದು ಕಾಯುತ್ತಿದ್ದಳು. ಆಗಾಗ್ಗೆ ಕಿಟಕಿಯಿಂದಾಚೆ ನೋಡುತ್ತಾತಿದ್ದಳು. ಅಲ್ಲಿ ಒಬ್ಬ ಗಡ್ಡಧಾರಿ ವ್ಯಕ್ತಿ ಒಂದು ಬ್ರೀಫ್‌ಕೇಸನ್ನು ಹಿಡಿದು ಅತ್ತಿತ್ತ ಸುತ್ತುತ್ತಿರುವುದನ್ನು ಗಮನಿಸಿದ್ದಳು.

ಬೆಲ್ ಆಗಲು ಇನ್ನು ಹತ್ತು ನಿಮಿಷಗಳಿದ್ದವು. ಮತ್ತೆ ಕಿಟಕಿಯಿಂದಾಚೆ ನೋಡಿದಾಗ, ಆ ವ್ಯಕ್ತಿ ಬ್ರೀಫ್‌ಕೇಸ್‌ಗೆ, ನೆಲದ ಮೇಲೆ ಬಿದ್ದಿದ್ದ ನೋಟುಗಳನ್ನು ಜೋಡಿಸಿ ತುಂಬುತ್ತಿರುವುದನ್ನು ಕಂಡಳು. ಸನ್ಯಾಸಿಯಂತೆ ವೇಷ ಧರಿಸಿರುವ ಕಳ್ಳನಿರಬಹುದು. ಯಾರದೋ ಹಣವನ್ನು ಲಪಟಾಯಿಸಿರಬೇಕೆಂದುಕೊಂಡಳು.

ಬೆಲ್ ಆಗುತ್ತಿದ್ದಂತೆ, ವಿದ್ಯಾರ್ಥಿಗಳಿಗಿಂತ ಮುಂದಾಗಿ ತಾನು ಹೊರ ಬಂದಳು. ಪಕ್ಕದ ಗಲ್ಲಿಯಿಂದ ನಡೆದು, ಆ ವ್ಯಕ್ತಿಯ ಬಳಿಗೆ ಬಂದಳು. ಅವನು ಸೂಟ್‌ಕೇಸನ್ನು ಮುಚ್ಚುತ್ತಿದ್ದ. ಶಶಿರೇಖಾ ಅವನ ಎದುರಿಗೆ ಬಂದು ನಿಂತಳು.

"ಯಾರ್ರೀ ನೀವು? ಇಲ್ಲೇನು ಮಾಡ್ತಿದ್ದೀರಿ? ಪೋಲೀಸರಿಗೆ ಫೋನು ಮಾಡ್ತೀನಿ" ಎಂದು ಹೆದರಿಸಿದಳು. ಆ ಗಡ್ಡಧಾರಿ ವ್ಯಕ್ತಿ ಮಾತಾಡಲಿಲ್ಲ. ಸುಮ್ಮನೆ ನಕ್ಕನು.

ಆ ನಗೆಯಿಂದ ಶಶಿರೇಖಾಳಿಗೆ ರೇಗಿತು. ಕಾಲೇಜಿನ ಆವರಣಕ್ಕೆ ವಾಪಸ್ಸು ಬಂದು, ಫೋನಿನ ಬೂತ್‌ಗೆ ಬಂದಳು. ಪೋಲೀಸ್ ಸ್ಟೇಷನ್‌ಗೆ ಫೋನು ಮಾಡಿ, ಇನ್‌ಸ್ಪೆಕ್ಟರ್‌ಗೆ ಹೇಳಿದಳು.

"ಇಲ್ಲಿ ಒಬ್ಬ ಕಳ್ಳ ಸನ್ಯಾಸಿ ಸುಗ್ಗಿದ್ದಾನೆ. ಅವನ ಬಳಿ ಇರುವ ಬ್ರೀಫ್‌ಕೇಸ್ ಹಣದಿಂದ ತುಂಬಿದೆ. ಕಳ್ಳತನ ಮಾಡಿದ್ದಾನೆಂಬ ಅನುಮಾನ ಬರುವಂತಿದೆ. ಬೇಗ ಬನ್ನಿ" ಎಂದು ಹೇಳಿ, ತನ್ನ ಹೆಸರನ್ನು ಕಾಲೇಜಿನ ವಿಳಾಸವನ್ನು ನೀಡಿದಳು.

ಅಷ್ಟರಲ್ಲಿ ಆ ವ್ಯಕ್ತಿ ಅಲ್ಲಿಂದ ಸರಿದು, ಪಕ್ಕದ ರಸ್ತೆಯಲ್ಲಿ ನಡೆಯುತ್ತಿರುವುದನ್ನು ಗಮನಿಸಿ, ಸರಸರನೆ ತಾನೂ ಅವನನ್ನು ಹಿಂಬಾಲಿಸಿದಳು. ಅದನ್ನು ಗಮನಿಸಿದ ಆ ವ್ಯಕ್ತಿ, ಜನರ ಮಧ್ಯೆ ನುಸುಳಿ ಎಲ್ಲೋ ಮರೆಯಾಗಿ ಬಿಟ್ಟನು. ಶಶಿರೇಖಾ ಅವನನ್ನು ಕಾಲೇಜಿನ ಆವರಣಕ್ಕೆ ಮತ್ತೆ ವಾಪಸ್ಸು ಬಂದಳು. ಪೋಲೀಸರಿಗೆ ತಾನು ನೋಡಿದ

ವಿಷಯವನ್ನು ತಿಳಿಸಿದಳು. ಅವರು ಅವಳು ಹೇಳಿದ ಸ್ಥಳಗಳಲ್ಲೆಲ್ಲಾ ಸುತ್ತಾಡಿ, ಅವನ ಬಗ್ಗೆ ವಿಷಯಗಳನ್ನು ಬರೆದುಕೊಂಡು, ಮತ್ತೆ ಕಂಡರೆ ತಕ್ಷಣ ತಿಳಿಸಬೇಕೆಂದು ಹೇಳಿ ಹೊರಟು ಹೋಗಿದ್ದರು.

ಎರಡು ಮೂರು ದಿನಗಳ ನಂತರ, ಶಶಿರೇಖಾ ತರಗತಿಯನ್ನು ಮುಗಿಸಿಕೊಂಡು ಕಾಲೇಜಿನಿಂದ ಹೊರಬಂದಾಗ, ಎದುರುಗಡೆ ಇದ್ದ ಪಾರ್ಕಿನಲ್ಲಿ ಆ ಗಡ್ಡಧಾರಿ ವ್ಯಕ್ತಿ ಇವಳಿಗೆ ಕಾಣುವಂತೆ ಕಲ್ಲು ಬೆಂಚಿನ ಮೇಲೆ ಕುಳಿತಿರುವುದನ್ನು ಕಂಡಳು. ಇವಳು ತನ್ನನ್ನು ಕಂಡಳು ಎಂದು ತಿಳಿದ ಕೂಡಲೇ ಆ ವ್ಯಕ್ತಿ ಅಲ್ಲಿಂದ ಎದ್ದು ಅವಳಿಗೆ ಬೆನ್ನು ಮಾಡಿ ಸರಸರನೆ ನಡೆಯತೊಡಗಿತು. ಶಶಿರೇಖಾ ವೇಗವಾಗಿ ನಡೆಯುತ್ತಾ ಆ ವ್ಯಕ್ತಿಯನ್ನು ಹಿಂಬಾಲಿಸಿದಳು. ಆ ವ್ಯಕ್ತಿ ಸಮೀಪದಲ್ಲೇ ಇದ್ದ ಹೋಟೆಲ್ಲನ್ನು ಹೊಕ್ಕಿತು. ಅವಳೂ ಹೋಟೆಲ್ಲಿನೊಳಗೆ ಬಂದು ಅತ್ತಿತ್ತ ಕಣ್ಣು ಹಾಯಿಸಿದಳು. ಕಾರಿಡಾರಿನ ಇನ್ನೊಂದು ಪಕ್ಕಕ್ಕೆ ಇದ್ದ ರೂಮುಗಳ ಕಡೆ ಆ ವ್ಯಕ್ತಿಯನ್ನು ಕಂಡು ಅಲ್ಲಿಗೆ ಧಾವಿಸಿದಳು.

ಒಂದು ರೂಮಿನ ಬಾಗಿಲು ಸ್ವಲ್ಪ ಮರೆಯಾಗಿತ್ತು. ಮಂತ್ರಕ್ಕೊಳಗಾದವಳಂತೆ ಬಾಗಿಲನ್ನು ತೆರೆದು ಆ ರೂಮನ್ನು ಹೊಕ್ಕಳು. ಅಲ್ಲಿ ಯಾರೂ ಇದ್ದಂತಿರಲಿಲ್ಲ. ಯಾವುದೋ ಸೆಳೆತಕ್ಕೆ ಸಿಕ್ಕಿದವಳಂತೆ, ರೂಮಿನೊಳಗೆ ಬಂದು ನಿಂತಳು. ಮರೆಯಲ್ಲಿ ನಿಂತಿದ್ದ ಆ ಗಡ್ಡಧಾರಿ ವ್ಯಕ್ತಿ ಅವಳ ಎದುರಿಗೆ ನಿಂತುಕೊಂಡರೂ, ಅರಿವೇ ಇಲ್ಲದವಳಂತೆ ಹಾಗೇ ನಿಂತಿದ್ದಳು. ಆ ವ್ಯಕ್ತಿ ರೂಮಿನ ಬಾಗಿಲನ್ನು ಒಳಗಿನಿಂದ ಭದ್ರಪಡಿಸಿ, ಶಶಿರೇಖಾಳ ಕೈಯನ್ನು ಹಿಡಿದುಕೊಂಡು ಮಂಚದ ಬಳಿಗೆ ಕರೆದೊಯ್ಯಿತು. ವಿರೋಧಿಸುವ ಶಕ್ತಿಯೇ ಇಲ್ಲದವಳಂತೆ ಶಶಿರೇಖಾ ಅವನೊಂದಿಗೆ ನಡೆದಿದ್ದಳು. ಮಂಚದ ಮೇಲೆ ಅವಳನ್ನು ಮಲಗಿಸಿ, ಅವಳನ್ನೇ ನೇರವಾಗಿ ನೋಡಿತು. ಕೈ ಕಾಲುಗಳನ್ನು ಚಲಿಸಲೂ ಆಗದವಳಂತೆ, ಅವಳು ನಿಶ್ಚೇತನವಾಗಿ ಮಲಗಿದ್ದಳು. ಕಣ್ಣುಗಳು ತೆರೆದಿದ್ದವು.

ಆ ವ್ಯಕ್ತಿ ತನ್ನ ಉಡುಪುಗಳನ್ನು ಕಳಚಿ ನಗ್ನನಾಗಿ ನಿಂತು. ಅವಳ ಉಡುಪುಗಳನ್ನು ಕಳಚಿತು. ಅವಳಿಗೆ ಅಸಹಾಯಕತೆಯಿಂದ ಮೇಲೇಳಲೂ ಆಗಲಿಲ್ಲ. ಕೂಗಿಕೊಳ್ಳಲೂ ಆಗಲಿಲ್ಲ. ಮೋಡಿಗೊಳಗಾದವಳಂತೆ, ಆತನ ಆಕ್ರಮಣವನ್ನು ಸಹಿಸಿಕೊಂಡಳು. ಆ ನಂತರ ಅವಳಿಗೆ ಏನಾಯಿತೆಂದು ತಿಳಿಯಲೇ ಇಲ್ಲ.

ಬೆಳಿಗ್ಗೆ ಎಚ್ಚರವಾದಾಗ, ರೂಮಿನಲ್ಲಿ ತಾನೊಬ್ಬಳೇ ಇರುವೆನೆಂಬ ಅರಿವು ನಿಧಾನವಾಗಿ ಆಯಿತು. ತಾನು ವಿವಸ್ತ್ರಳಾಗಿರುವುದನ್ನು ಕಂಡಾಗ, ಹಿಂದಿನ ದಿನ ಏನು ನಡೆಯಿತೆಂಬ ವಿಷಯ ನೆನೆಪಿಗೆ ಬಂತು. ಆ ದುರಾಚಾರಿ ಗಡ್ಡದ ವ್ಯಕ್ತಿ ತನ್ನನ್ನು ಸಮ್ಮೋಹನಗೊಳಿಸಿ, ತನ್ನನ್ನು ಈ ರೂಮಿಗೆ ಕರೆ ತಂದು ತನ್ನ ಮೇಲೆ ಬಲಾತ್ಕಾರ ನಡೆಸಿರುವನೆಂದು ಅರ್ಥವಾಯಿತು. ಅವಮಾನದಿಂದ ಉಸಿರು ಕಟ್ಟಿದಂತಾಯಿತು. ಶಶಿರೇಖಾ ಬಟ್ಟೆಗಳನ್ನು ಧರಿಸಿ, ಆ ವ್ಯಕ್ತಿ ಇಲ್ಲೇ ಎಲ್ಲೋ

ಅಡಗಿರುವನೆಂದು ಅವನಿಗಾಗಿ ಹುಡುಕಾಟ ನಡೆಸಿದಳು. ಆದರೆ ಆ ವ್ಯಕ್ತಿ ಕಾಣಲಿಲ್ಲ. ಅವಳನ್ನು ಆ ಅವಸ್ಥೆಗೆ ಗುರಿ ಪಡಿಸಿ, ತನ್ನ ಕಾಮವನ್ನು ತೀರಿಸಿಕೊಂಡು ಅಲ್ಲಿಂದ ಪರಾರಿಯಾಗಿದ್ದನು. ಅವನ ಬ್ರೀಫ್‌ಕೇಸ್ ಸಹ ಅಲ್ಲಿರಲಿಲ್ಲ.

ಅವನ್ಯಾರು? ಅವನು ತನಗೇನು ಮಾಡಿದ? ತಾನೇಕೆ ಅವನಿಗೆ ಆಕರ್ಷಿತಳಾಗಿ ಅವನ ಹಿಂದೆ ಬಂದು, ಅವನಿಂದ ಬಲಾತ್ಕಾರಕ್ಕೊಳಗಾದೆ...? ತಾನು ಪೋಲೀಸರಿಗೆ ಕಂಪ್ಲೇಂಟ್ ಕೊಡಬೇಕೆಂದುಕೊಂಡಳು. ಅಲ್ಲಿಂದ ಸರಸರನೆ ಹೊರಬಂದು ಒಂದು ಆಟೋ ಹಿಡಿದು ತನ್ನ ಮನೆಗೆ ಬಂದಳು.

ತಾನು ಧರಿಸಿದ್ದ ಬಟ್ಟೆಗಳನ್ನು ಜಿಚ್ಚಿ ಒಗೆದು, ನಂತರ ತಾನೂ ಸ್ನಾನ ಮಾಡಿ ಶುಚಿಯಾದಳು. ಆದರೂ ಮನದೊಳಗೆ ಅಂಟಿದ್ದ ಕಳಂಕವನ್ನು ತೊಳೆಯಲು ಸಾಧ್ಯವೇ? ಕನ್ನಡಿ ಮುಂದೆ ನಿಂತವಳು ಹಾಗೇ ಕುಸಿದು ಕುಳಿತಳು. ತನ್ನ ಈ ಯೌವನವನ್ನು ತನಗರಿವಿಲ್ಲದಂತೆ ಸೂರೆಗೊಂಡ ಈ ಮೋಸಗಾರ ಯಾರು? ಈ ವ್ಯಕ್ತಿಗೆ ಶಿಕ್ಷೆ ಕೊಡಿಸದೇ ಬಿಡಬಾರದು ಎಂದುಕೊಂಡು ಬಟ್ಟೆ ಧರಿಸಿ ಸಿದ್ಧಳಾದಳು. ಆದರೆ ಮನೆಯಿಂದ ಹೊರಬಂದು ರಸ್ತೆಗಿಳಿದಾಗ, ಅವಳ ಮನ ಬದಲಾಗಿತ್ತು. ತಾನೀಗ ಪೋಲೀಸ್ ಸ್ಟೇಷನ್‌ಗೆ ಹೋಗಿ ಕಂಪ್ಲೆಂಟ್ ಕೊಟ್ಟರೆ ತನ್ನ ಮಾತನ್ನು ನಂಬುವವರ್‍ಯಾರು? ಹಿಂದಿನ ದಿನ ಕಂಡ ಕಳ್ಳ ಸನ್ಯಾಸಿಯೇ ಈ ಗಡ್ಡಧಾರಿ ವ್ಯಕ್ತಿ ಎಂದು ಸಾಬೀತು ಪಡಿಸುವುದಾದರೂ ಹೇಗೆ? ತಾನೇಕೆ ಅವನ ಹಿಂದೆ ಹೋದೆನೆಂದು ಅವರು ಪ್ರಶ್ನಿಸಿ ನಗುವುದಿಲ್ಲವೆ? ತನ್ನನ್ನು ತಾನೇ ಅಪಹಾಸ್ಯಕ್ಕೊಳ ಮಾಡಿ ಕೊಂಡಂತಾಗುತ್ತದೆಂದು ಕೊಂಡು ಕಾಲೇಜಿಗೆ ಬಂದಳು.

ಎದುರಿಗಿದ್ದ ಪಾರ್ಕಿನ ಕಲ್ಲು ಬೆಂಚಿನ ಕಡೆ ಗಮನ ಹೋಯಿತು. ಅಲ್ಲಿ ಯಾರೂ ಕುಳಿತಿರಲಿಲ್ಲ. ಪಾಠ ಮಾಡುವಾಗ, ಕಿಟಕಿಯಿಂದಾಚೆ ಕಣ್ಣು ಹಾಯಿಸಿದಳು. ಅಲ್ಲಿ ಯಾವ ವ್ಯಕ್ತಿಯೂ ಅಡ್ಡಾಡುತ್ತಿರಲಿಲ್ಲ. ಎರಡು ದಿನದಿಂದ ತನಗೇನಾಗಿದೆ? ತಾನು ಯಾವ ಭ್ರಮೆಗೆ ಒಳಗಾಗಿದೀನೆಂದು ಅವಳಿಗೆ ಅರಿವಾಗಲಿಲ್ಲ. ತಲೆ ನೋಯುತ್ತಿದೆಯೆಂದೆನಿಸಿತ್ತು. ರಜ ಹಾಕಿ ಮನೆಗೆ ಬಂದು ಮಲಗಿದಳು. ಮತ್ತೊಮ್ಮೆ ನಡೆದ ಘಟನೆಗಳು ಕಣ್ಣ ಮುಂದೆ ಬಂದಿತು. ಹೆದರಿ ಎದ್ದು ಕೂತಳು. ತನಗೇ ಯಾಕೆ ಹೀಗಾಯಿತು? ತಾನು ವಿವಾಹಿತಳು ನಿಜ... ಆದರೆ ಪತಿ ತನ್ನ ಬಳಿ ಇಲ್ಲ. ತನ್ನ ಪತಿಗೂ ಸಹ ತಾನು ತನ್ನ ದೇಹವನ್ನು ಒಪ್ಪಿಸಿರಲಿಲ್ಲ. ಈಗೇನಾಯ್ತು? ಯಾಕೆ ಹೀಗಾಯ್ತು?... ಅವನ ಹಿಂದೆ ತಾನೇಕೆ ಹೋದೆ?... ಅವನು ಹೇಳಿದುದಕ್ಕೆ ಒಪ್ಪಿದೆ?... ಅವನನ್ನೇಕೆ ದೂರ ಸರಿಸಲಿಲ್ಲ?... ಅಳು ಬರುವಂತಾಗಿತ್ತು.

ಈಗ ಈ ವಿಷಯವನ್ನು ಯಾರಿಗೆ ಹೇಳಿದರೂ ನಂಬುವುದಿಲ್ಲ. ನನ್ನ ಬಾಳು ನಗೆಪಾಟಲು ಆಗುತ್ತದೆ. ತಾನು ಈ ಬಗ್ಗೆ ಯಾರಿಗೂ ಹೇಳಬಾರದು. ಎಲ್ಲಾ ಒಂದು ಕೆಟ್ಟ ಕನಸು ಎಂಬಂತೆ ಮರೆತು ಬಿಡಬೇಕೆಂದು ಕೊಳ್ಳುತ್ತಿದ್ದಳು. ಆದರೆ ಅದು ಸಾಧ್ಯವಾಗಲಿಲ್ಲ. ಕಾಲೇಜಿನಲ್ಲಿ ಪಾಠ ಮಾಡಲಾಗುತ್ತಿರಲಿಲ್ಲ. ಆ ರಸ್ತೆಯಲ್ಲಿ

ಓಡಾಡಬೇಕೆನಿಸಲಿಲ್ಲ. ಕೆಲವು ದಿನಗಳ ರಜ ಹಾಕಿ ಮನೆಯಲ್ಲೇ ಉಳಿದಳು. ದಿನದಿನಕ್ಕೆ ಅವಳ ಭಯ, ಆತಂಕ ಹೆಚ್ಚಾಗತೊಡಗಿತು. ಅವಳು ಊಹಿಸಿದ್ದಂತೆಯೇ ಆಗಿತ್ತು. ಅವಳು ಬಸುರಿಯಾಗಿದ್ದಳು. ಡಾಕ್ಟರರ ಬಳಿಗೆ ಹೋಗಿ ಪರೀಕ್ಷೆ ಮಾಡಿಸಿಕೊಂಡಳು. ಅವಳು ತಾಯಿಯಾಗಲಿದ್ದಳು. ದಿಕ್ಕು ತೋಚದಂತೆ ಯೋಚಿಸಿದಳು. ಆದರೂ ಪರಿಹಾರ ಕಾಣಲಿಲ್ಲ. ಅಬಾರ್ಷನ್ ಮಾಡಿಸಿಕೊಳ್ಳಲು ಹಿಂಜರಿದಳು. ನಡೆದುದನ್ನು ತಿಳಿಸಲು ಮನಸ್ಸು ಒಪ್ಪುತ್ತಿರಲಿಲ್ಲ.

ದಿನಗಳು ಕಳೆದವು. ಬಯಕೆ ಸಂಕಟ ಪ್ರಾರಂಭವಾಗಿತ್ತು. ವಾಕರಿಕೆ, ವಾಂತಿಯಿಂದ ಅನ್ನ ಸೇರುತ್ತಿರಲಿಲ್ಲ. ಬಳಲಿಕೆ ಉಂಟಾಗುತ್ತಿತ್ತು. ಡಾಕ್ಟರ ಬಳಿಗೆ ಹೋಗಿ "ನಾನು ಈ ಕಷ್ಟಗಳನ್ನು ಸಹಿಸಲಾರೆ. ಮೈ ಇಳಿದು ಹೋಗುವಂತೆ ಏನಾದರೂ ಮಾತ್ರೆಯನ್ನು ಕೊಡಿ" ಎಂದು ಕೇಳಿದ್ದಳು.

ಅವರು ನಕ್ಕು ನುಡಿದರು "ಪ್ರತಿಯೊಬ್ಬ ಹೆಂಗಸಿಗೂ ತಾಯಿಯಾಗುವಾಗ ಕಂಡು ಬರುವ ಈ ಲಕ್ಷಣಗಳು ಸಹಜ. ಇದಕ್ಕಾಗಿ ಕಷ್ಟ ಪಡಲಾರೆ ಅಂತ ಹೇಳುತ್ತಿರುವ ಹೆಂಗಸು ಬಹುಶಃ ನೀವೇ ಮೊದಲಿಗರು. ಭ್ರೂಣ ಹತ್ಯೆ ಅಪರಾಧ. ನಿಮ್ಮ ಪತಿಗೆ ಈ ವಿಷಯವನ್ನು ತಿಳಿಸಿ. ನಾನೂ ಅವರ ಹತ್ತಿರ ಮಾತಾಡ್ತೀನಿ..."

ಅವಳು ಸುಮ್ಮನಾದಳು. ಮೂರು ತಿಂಗಳ ಈ ಕಷ್ಟಗಳನ್ನು ಸಹಿಸಿಕೊಂಡಳು. ಐದು ತಿಂಗಳು ತುಂಬುವಷ್ಟರಲ್ಲಿ ಹೊಟ್ಟೆಯಲ್ಲಿ ಮಗುವಿನ ಚಲನೆ ಪ್ರಾರಂಭವಾಗಿತ್ತು. ಒಡಲೊಳಗೆ ಮಗು ಓಡಾಡಿದಂತೆಲ್ಲಾ ಇವಳು ಪುಳಕಿತಳಾಗುತ್ತಿದ್ದಳು. ಅವಳಿಗೇ ಅರಿವಿಲ್ಲದಂತೆ ಅವಳು ಮಗುವನ್ನು ಪ್ರೀತಿಸತೊಡಗಿದ್ದಳು. ತನ್ನ ಒಡಲೊಳಗೆ ಬೆಚ್ಚಗೆ ಮಲಗಿರುವ ಮಗು! ನನ್ನ ರಕ್ತ ಮಾಂಸಗಳನ್ನು ಹಂಚಿಕೊಂಡು ಹುಟ್ಟುವ ಮಗು! ನನ್ನ ಎದೆ ಹಾಲನ್ನು ಹೀರಿ, ನನ್ನ ಹೆಣ್ತನವನ್ನು ಸಾರ್ಥಕಗೊಳಿಸಲೆಂದೇ ಹುಟ್ಟಲಿರುವ ಈ ಮಗು ನನ್ನದು! ನಾನು ಈ ಮಗುವಿನ ತಾಯಿ... ನಾನು ಹೊತ್ತು ಹೆತ್ತು ಸಾಕಿ ಬೆಳೆಸಿ ಪೋಷಿಸುತ್ತೇನೆ. ಅಪ್ಪ ಯಾರಾದರೇನಂತೆ! ಮೋಸಕ್ಕೊಳಗಾಗಿ ಬಸುರಾದೆ ಎಂದು ನಾನು ಯಾರಿಗೂ ಹೇಳಬೇಕಾಗಿಲ್ಲ. ನನಗೆ ಮದುವೆಯಾಗಿದೆ, ಅವನೇ ಈ ಮಗುವಿನ ತಂದೆ ಎಂದು ಜನ ತಿಳಿಯುತ್ತಾರೆ. ನಾನು ಈ ಅಂಜಿಕೆಯನ್ನು ಬಿಟ್ಟು ಬಿಡಬೇಕು. ನನಗೆ ಕೆಲಸವಿದೆ, ಸಂಪಾದನೆ ಇದೆ. ಮಗುವನ್ನು ಸಲಹುವ ಶಕ್ತಿ ಇದೆ. ಇನ್ನೇನು ಎಂದು ತನಗೆ ತಾನೇ ಸಮಾಧಾನವನ್ನು ಹೇಳಿಕೊಂಡು, ಮಗುವಿನ ಆಗಮನವನ್ನು ಕಾತುರದಿಂದ ಎದುರು ನೋಡತೊಡಗಿದಳು. ಮಮತೆಯಿಂದ, ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡು, ಒಡಲೊಳಗೆ ಇರುವ ಮಗುವನ್ನು ಮುದ್ದಿಸುತ್ತಿದ್ದಳು.

* * * * *

ಹೋಟೆಲ್ಲಿನ ರೂಮಿನಲ್ಲಿ ಕುಳಿತಿದ್ದ ಶಶಿಧರ ನಡೆದು ಹೋದ ಘಟನೆಯ ಬಗ್ಗೆ ಮೆಲುಕು ಹಾಕಿದ. ತಾನು ಅವಳಿಗೆ ಸರಿಯಾಗಿ ಪಾಠ ಕಲಿಸಿದೆ ಎಂದು ತನಗೆ

ತಾನೇ ಶಾಭಾಸ್ ಹೇಳಿಕೊಂಡ. "ಅವಳಿಗೆ ತಾನು ಯಾರು ಎಂದು ತಿಳಿಯಲೇ ಇಲ್ಲ. ತನ್ನನ್ನು ಪೋಲೀಸರಿಗೆ ಹಿಡಿದುಕೊಡಬೇಕೆಂದು ಪ್ರಯತ್ನಿಸಿದಳಲ್ಲವೆ? ತಕ್ಕ ಶಿಕ್ಷೆಯನ್ನು ಅನುಭವಿಸಿದಳು. ಜೀವಮಾನವೆಲ್ಲಾ ಮರೆಯಲಾಗದಂಥ ಅನುಭವ ಅವಳಿಗಾಗಿದೆ. ಇನ್ನಾದರೂ ಅವಳ ಜಂಭ ಅಡಗಲೇ ಬೇಕು. ಅಹಂಕಾರದಿಂದ ನನ್ನನ್ನು ಜರೆದಿದ್ದಳಲ್ಲವೆ? ಎಷ್ಟಾಗಲೀ ಹೆಣ್ಣು ಗಂಡಿಗೆ ಸೋಲಲೇ ಬೇಕು. ಸೋತು ಶರಣಾದವಳಂತೆ ಬೆತ್ತಲೆ ಮಲಗಿದ್ದಳಲ್ಲವೆ? ತುಟಿಯಂಚಿನಲ್ಲಿ ಕಿರುನಗೆ ಮಿಂಚಿತು. ಒಮ್ಮೆ ನೀನು ನನಗೆ ಸೋತರೆ ಮುಗೀತು. ಇನ್ನು ನೀನು ನನ್ನ ಬಳಿಗೆ ಬರಲೇ ಬೇಕು. ನಾನು ಗೆದ್ದೆ.." ಎಂದು ನುಡಿದುಕೊಂಡರೂ, ನಿರಾಸೆಯ ಆ ದಿನಗಳು ನೆನಪಿಗೆ ಬಂದವು.

* * * * *

ಶಶಿರೇಖಾ ನೋಡಲು ಸುಂದರಿಯಾಗಿದ್ದಳು. ವಿದ್ಯೆ ಇತ್ತು, ಸ್ವಲ್ಪ ಮಟ್ಟಿಗೆ ಅಹಂಕಾರವೂ ಇತ್ತು. ಇವಳನ್ನು ನೋಡಿದ ಕೂಡಲೇ ತನ್ನ ಒಪ್ಪಿಗೆಯನ್ನು ತಿಳಿಸಿದ್ದ. ಇವರಿಬ್ಬರ ಮದುವೆ ಸಾಂಗವಾಗಿ ನೆರವೇರಿತ್ತು.

ಮೊದಲ ರಾತ್ರಿ ಇಬ್ಬರೇ ಏಕಾಂತದಲ್ಲಿದ್ದಾಗ ಇವನು ಬಹಳ ಉತ್ಸುಕನಾಗಿದ್ದ. ಅವಳು ಸಂಕೋಚದ ತೆರೆಯನ್ನು ಹಾಕಿಕೊಂಡು ಕಾದಿದ್ದಳು. ಇವನು ಅವಳ ಮಗ್ಗುಲಲ್ಲಿ ಕುಳಿತು ಮಾತಿಗೆ ಪ್ರಾರಂಭಿಸಿದ.

"ನನ್ನನ್ನು ಕ್ಷಮಿಸು ರೇಖಾ... ನಾನೊಂದು ಸುಳ್ಳು ಹೇಳಿದ್ದೀನಿ" ಎಂದ.

"ಆಂ..." ಎಂದಳು ಬೆಚ್ಚಿ. ಅವಳ ದೇಹ ವಿನಾಕಾರಣ ನಡುಗಿತು. "ನಾನು ನಿನಗೆ ಯೋಗ್ಯನಲ್ಲ. ನಾನು ವಿದ್ಯಾವಂತನಲ್ಲ. ನನಗೆ ಕೆಲಸವಿಲ್ಲ. ಸಂಪಾದನೆ ಇಲ್ಲ. ನನ್ನ ತಂದೆಯ ಆಶ್ರಯದಲ್ಲಿದೀನಿ. ನಾವು ಇಲ್ಲಿಯೇ ಇರಬೇಕಾಗುತ್ತದೆ. ಇದಕ್ಕೆ ನಿನ್ನ ಒಪ್ಪಿಗೆ ಇದೆ ಎಂದುಕೊಂಡಿದೀನಿ."

ಮೊದಲಿಗೆ ಅವಳಿಗೆ ಅರ್ಥವಾಗಲಿಲ್ಲ. ತನ್ನ ಗಂಡ ನಿಷ್ಪ್ರಯೋಜಕ. ವರದಕ್ಷಿಣೆ ತೆಗೆದುಕೊಂಡು ಮದುವೆಯಾಗಿದ್ದಾನೆ. ತನಗೆ ಸಮಾನನಲ್ಲ ಎನ್ನುವುದು ನಿಧಾನವಾಗಿ ಅರ್ಥವಾದಾಗ ಅವಳು ಅವನಿಂದ ದೂರ ಸರಿದಳು. ಅವನಿಗೆ ಅವಮಾನವಾದಂತಾಗಿತ್ತು.

"ನಿನಗೆ ಬೇಸರವಾಗಿರಬಹುದು. ಆದರೆ ಮನದಲ್ಲಿ ಈ ವಿಷಯವನ್ನು ಮುಚ್ಚಿಟ್ಟುಕೊಂಡು ನಿನ್ನೊಡನೆ ದಾಂಪತ್ಯವನ್ನು ಪ್ರಾರಂಭಿಸುವ ಆಸೆಯಾಗಲಿಲ್ಲ. ಅದಕ್ಕೆ ನಿಜವನ್ನೇ ಹೇಳಿ ಬಿಟ್ಟೆ" ಅವಳು ಬಿರುಗಣ್ಣುಗಳನ್ನು ಬಿಟ್ಟಳು.

"ನೀವು ಹೀಗೆ ಮೋಸ ಮಾಡ್ತೀರಿ ಅಂತ ನಾನಂದುಕೊಂಡಿರಲಿಲ್ಲ"

"ಮೋಸ ಎಲ್ಲಿ? ನಿಜ ಹೇಳಿದ್ನಲ್ಲ. ಕೆಲಸಕ್ಕೆ ಪ್ರಯತ್ನ ಮಾಡ್ತಿದೀನಿ. ನಿನ್ನ ಕಾಲ್ಗುಣದಿಂದ ನನಗೆ ಆದಷ್ಟು ಬೇಗ ಕೆಲಸ ಸಿಗುತ್ತದೆ ನೋಡ್ತಿರು."

"ಕೆಲಸ ಸಿಗುವವರೆಗೆ ಕಾಯಬೇಕಾಗಿತ್ತು. ಮದುವೆಗೆ ಏನು ಅವಾಂತರವಿತ್ತು. ನನಗೆ ಯಾವ ಆತುರವಿರಲಿಲ್ಲ."

"ನಿನಗೆ ಆತುರವಿರಲಿಲ್ಲ. ನನಗೆ ಆತುರವಿತ್ತು ರೇಖಾ... ನನಗೆ ಈಗಾಗಲೇ ವಯಸ್ಸಾಗಿದೆ. ನಿನ್ನನ್ನು ಕಂಡಾಗಿನಿಂದ ಮನಸ್ಸು ನಿನ್ನನ್ನೇ ಬಯಸುತ್ತಿತ್ತು. ಹತ್ತಿರ ಬಾ... ದೂರ ಯಾಕೆ ಕುಳಿತಿದೀಯ..." ಅವಳ ಕೈ ಹಿಡಿದ.

ಅವಳು ಕೈ ಕೊಸರಿಕೊಂಡಳು. "ಕೆಲಸ ಇಲ್ಲ, ಸಂಪಾದನೆ ಇಲ್ಲ. ಈ ಸರಸ ಮಾತ್ರ ಬೇಕಾ? ನನಗೆ ಇದೆಲ್ಲ ಇಷ್ಟವಾಗಲ್ಲ. ಗಂಡಸಿಗೆ ಒಂದು ಸ್ಥಾನಮಾನ ಬೇಕು, ಉದ್ಯೋಗವಿರಬೇಕು. ವರದಕ್ಷಿಣೆಯ ಹಣದಲ್ಲಿ ಜೀವನ ನಡೆಸುಕ್ಕೆ ಆಗುತ್ತಾ?.."

"ಹಂಗಿಸಿ ಮಾತಾಡಬೇಡ... ಇದು ನಮ್ಮ ಮೊದಲ ರಾತ್ರಿ. ಈ ರಾತ್ರಿಯ ಸೊಗಸನ್ನು ಹಾಳು ಮಾಡಬೇಡ. ನನಗೆ ಚೆನ್ನಾಗಿ ಪ್ರೀತಿ ಮಾಡಲು ಬರುತ್ತದೆ. ಅವಳನ್ನು ತನ್ನೆಡೆಗೆ ಎಳೆದುಕೊಳ್ಳಲು ಪ್ರಯತ್ನಿಸಿದ.

ಅವಳು ಎದ್ದು ನಿಂತಳು. "ನಿಮ್ಮ ಈ ಪ್ರೀತಿ ಯಾರಿಗೆ ಬೇಕು? ನನ್ನ ಕನಸುಗಳನ್ನು ನುಚ್ಚು ನೂರು ಮಾಡಿದಿರಿ. ನಾಲ್ಕು ಕಾಸು ಸಂಪಾದನೆ ಮಾಡುವ ಯೋಗ್ಯತೆ ಇಲ್ಲ. ನನ್ನ ಸಹವಾಸ ಬೇಕಾ? ನನ್ನ ಎದೆ ಅವಮಾನದಿಂದ ಕುದ್ದು ಹೋಗುತ್ತಿದೆ. ನನ್ನೆದುರಿಗೆ ನಿಲ್ಲಬೇಡಿ. ಹೊರಟು ಹೋಗಿ" ಅವಳು ಅವಳಿಗೆ ಬೆನ್ನು ಮಾಡಿ ನಿಂತು ಹೇಳಿದಾಗ ಅವನಿಗೂ ಕೋಪ ಬಂತು.

"ಇದೇ ಕಡೆಯ ಮಾತಾ? ನಾನೂ ನೋಡ್ತೀನಿ. ನೀನು ಒಬ್ಬಳೇ ಹೇಗಿರ್ತೀಯ ಅಂತ. ಹತ್ತಿರ ಬಂದ ಗಂಡನಿಗೆ ಅವಮಾನ ಮಾಡಿ ದೂರ ತಳ್ಳಿದೀಯ. ಈ ದಿನವನ್ನು ನಾನು ನೆನಪಿನಲ್ಲಿಟ್ಟು ಕೊಳ್ತೀನಿ" ಎನ್ನುತ್ತಾ ಕೋಣೆಯ ಬಾಗಿಲನ್ನು ತೆರೆದು ಎಲ್ಲಿಯೋ ಹೊರಟು ಹೋದ. ಅವರಿಬ್ಬರ ಮಧ್ಯೆ ಏನು ನಡೆಯಿತೆಂದು ಮನೆಯವರಿಗೆ ಸರಿಯಾಗಿ ತಿಳಿಯಲಿಲ್ಲ. ಅವನು ಆ ಊರನ್ನೇ ಬಿಟ್ಟು ಹೊರಟು ಹೋಗಿದ್ದ. ಅವಳು ತವರು ಮನೆಯನ್ನು ಸೇರಿದ್ದಳು.

ಗಂಡ ಬಿಟ್ಟವಳು ಎಂಬ ಪಟ್ಟ ಅವಳಿಗೆ ಸಿಕ್ಕಿತ್ತು. ಒಮ್ಮೊಮ್ಮೆ ಅವನು ಬಂದರೆ ಏನು ಮಾಡುವುದೆಂದು ದಿಗಿಲಾಗುತ್ತಿತ್ತು. ತಾನು ದುಡುಕಿದೆನೇನೋ ಅಂತ ಅನ್ನಿಸಿದಾಗ, ಅವನು ಮೋಸಗಾರನೆಂದೇ ಅನ್ನಿಸುತ್ತಿತ್ತು. ಅದೇ ಊರಿನಲ್ಲಿ ಇರಲಾಗದೇ ಅಜ್ಜಿಯ ಊರಿಗೆ ಹೋಗಿ ಮತ್ತೆ ಕಾಲೇಜಿಗೆ ಸೇರಿಕೊಂಡು ವಿದ್ಯಾಭ್ಯಾಸವನ್ನು ಮುಂದುವರೆಸಿದಳು. ಇಂಗ್ಲೀಷ್ ಸಾಹಿತ್ಯದಲ್ಲಿ ಎಂ.ಎ. ಪದವಿಯನ್ನು ಪಡೆದುಕೊಂಡಳು. ಮತ್ತೆ ತನ್ನ ಊರಿಗೆ ವಾಪಸ್ಸು ಬಂದು, ಕಾಲೇಜಿನಲ್ಲಿ ಲೆಕ್ಚರರ್ ಕೆಲಸಕ್ಕೆ ಸೇರಿಕೊಂಡಳು.

ಮೂರು ವರ್ಷಗಳು ಕಳೆದಿದ್ದವು. ಒಂದೇ ದಿನಕ್ಕೆ ಮುಗಿದು ಹೋದ ತನ್ನ ದಾಂಪತ್ಯದ ಬಗ್ಗೆ ಒಮ್ಮೊಮ್ಮೆ ಬೇಸರವೂ ಆಗುತ್ತಿತ್ತು. ತಾನು ಡೈವೋರ್ಸ್

ತೆಗೆದುಕೊಂಡಿದ್ದರೆ ಮರು ಮದುವೆಯಾಗಬಹುದಾಗಿತ್ತು ಎನ್ನುವ ಆಸೆಯೂ ಇಣುಕುತ್ತಿತ್ತು. ಆದರೆ ಗಂಡಸನ್ನು ನಂಬುವುದು ಹೇಗೆ? ಅವನೂ ಮೋಸಗಾರನೇ ಆದರೆ, ಆ ಅನಿಸಿಕೆ ಭಯವನ್ನು ಹುಟ್ಟಿಸುತ್ತಿತ್ತು. ಗಂಡಸು ಜಾತಿಯ ಮೇಲೆ ಅವಳಿಗೆ ಏನೋ ಕೋಪ ಎಲ್ಲರೂ ವಂಚಕರೇ... ಎನ್ನುವ ತೀರ್ಮಾನಕ್ಕೆ ಬರುತ್ತಿದ್ದಳು.

ಕಾಲೇಜಿನಲ್ಲೂ ಅವಳು ಎಲ್ಲರನ್ನು ದೂರ ಇಟ್ಟಿದ್ದಳು. ಗಂಡಸರನ್ನು ವಿಚಿತ್ರ ಪ್ರಾಣಿಗಳಂತೆ ಕಾಣುತ್ತಿದ್ದಳು. ಹೆಂಗಸರ ಸ್ನೇಹ ಬೇಕೆನಿಸುತ್ತಿರಲಿಲ್ಲ. ಒಂಟಿಯಾಗಿ ತನ್ನ ಪಾಡಿಗೆ ತಾನು ಇರುತ್ತಿದ್ದವಳ ಬಗ್ಗೆ ಯಾರಿಗೂ ಯಾವ ಭಾವನೆಗಳಿರಲಿಲ್ಲ.

ಅವಳಿಂದ ದೂರದಲ್ಲಿದ್ದುಕೊಂಡೇ ಶಶಿಧರ ಅವಳ ದಿನಚರಿಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿದ. ಅವನೀಗ ಒಬ್ಬ ಬಿಸಿನೆಸ್‌ನವನಾಗಿದ್ದ. ವರದಕ್ಷಿಣೆಯ ಹಣದಲ್ಲಿ ಚಿಕ್ಕದೊಂದು ಬಿಸಿನೆಸ್ ಪ್ರಾರಂಭಿಸಿ, ಪ್ರವರ್ಧಮಾನಕ್ಕೆ ಬಂದಿದ್ದ. ಅವಳಾಡಿದ ಮಾತುಗಳು ಕಿವಿಯಲ್ಲಿ ಗುಂಯ್‌ಗುಡುತ್ತಿದ್ದವು. ಅವಳ ಅಹಂಕಾರಕ್ಕೆ ಪ್ರತೀಕಾರ ತೆಗೆದುಕೊಳ್ಳಬೇಕೆಂಬ ಇಚ್ಛೆ ಪ್ರಬಲವಾಗುತ್ತಿದ್ದವು ಅವಳು ತನ್ನನ್ನು ಹುಡುಕಿಸುವ ಪ್ರಯತ್ನವನ್ನು ಸಹ ಮಾಡಿಲ್ಲವೆಂದು ತಿಳಿದಾಗ, ಹೇಗಾದರೂ ಸರಿ ಅವಳ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಯೋಜನೆಯನ್ನು ಹಾಕುತ್ತಿದ್ದ. ಸೇಲ್ಸ್ ರೆಪ್ರೆಸೆಂಟಟಿವ್ ಆಗಿ ಕೆಲಸವನ್ನು ನಿರ್ವಹಿಸುತ್ತಾ ಸಾಕಷ್ಟು ಹಣವನ್ನು ಸಂಪಾದಿಸಿದ. ತಾನೂ ಈಗ ಹಣವಂತ, ತಾನೂ ಸಮರ್ಥನೆಂದು ತನ್ನ ಪತ್ನಿಗೆ ಮನದಟ್ಟು ಮಾಡಿಕೊಡಬೇಕೆಂದು ಉತ್ಕಟ ಬಯಕೆ ಉಂಟಾಗುತ್ತಿತ್ತು.

ಬ್ರೀಫ್‌ಕೇಸ್‌ಗೆ ಒಂದಿಷ್ಟು ಹಣಗಳನ್ನು ತುಂಬಿಕೊಂಡ. ಶ್ರೀಮಂತನಂತೆ ಭಾರಿ ಸೂಟ್ ಧರಿಸಿ ಕಾರಿನಲ್ಲಿ ಅಡ್ಡಾಡಿ ಅವಳನ್ನು ಆಕರ್ಷಿಸುವುದೋ ಅಥವಾ ಕಾವಿಯ ಉಡುಗೆಯನ್ನು ತೊಟ್ಟು ಕಳ್ಳ ಸನ್ಯಾಸಿಯಂತೆ ಓಡಾಡಿ, ಅವಳ ಗಮನ ಸೆಳೆಯುವುದೋ ಎಂದು ಅನೇಕ ಬಾರಿ ಯೋಚಿಸಿದ. ಕಡೆಗೆ, ಸನ್ಯಾಸಿಯ ವೇಷವೇ ಸರಿ ಎಂದು ನಿರ್ಧರಿಸಿ, ಕಾಲೇಜಿನ ಬಳಿ ಓಡಾಡಿ ಅವಳ ಗಮನವನ್ನು ಸೆಳೆಯುವುದರಲ್ಲಿ ಸಫಲನಾದ. ಅವಳು ಪಾಠ ಮಾಡುತ್ತಿದ್ದ ತರಗತಿಯ ಮತ್ತೊಂದು ಪಕ್ಕದಲ್ಲಿ ಬೇಕೆಂದೇ ಹಣವನ್ನು ಸುರಿದು ಅವಳು ಅನುಮಾನ ಪಡುವಂತೆ ವರ್ತಿಸಿದ್ದ. ಬೇರೆಯವರ್‍ಯಾರಾದರೂ ನೋಡಿ ಸಿಕ್ಕಿ ಬೀಳುವೆನೆಂಬ ಭಯವೂ ಇತ್ತು. ಅದಕ್ಕೆ ಪೂರಕವಾದ ಉಪಾಯಗಳನ್ನು ಮಾಡಿಟ್ಟುಕೊಂಡಿದ್ದ. ಅವಳ ಸ್ವಭಾವವನ್ನು ಅರಿತಿದ್ದ. ಅವಳು ಒಂಟಿಯಾಗಿ ತಿರುಗುವಳೆನ್ನುವುದನ್ನು ತಿಳಿದಿದ್ದನಾದುದರಿಂದ, ಅವಳು ಬರುವ ರಸ್ತೆಯಲ್ಲಿ ಅವಳಿಗೆ ಕಾಣುವಂತೆ ಪಾರ್ಕಿನಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತಿದ್ದ. ಅನೇಕ ದಿನಗಳ ರಿಹರ್ಸಲ್ ಕೂಡಾ ಮಾಡಿದ್ದ. ಅನುಮಾನಾಸ್ಪದವಾದ ರೀತಿಯಲ್ಲಿ ವರ್ತಿಸಿ ಅವಳು ತನ್ನನ್ನು ಹಿಂಬಾಲಿಸುವಂತೆ ಮಂಕುಬೂದಿಯನ್ನು ಎರಚಿದ್ದ. ಪ್ರಸಿದ್ಧ ಮಾಂತ್ರಿಕರ ಸಹಾಯದಿಂದ ಅವಳು ಸಂಮೋಹನಕ್ಕೆ ಒಳಗಾಗುವಂತೆ ಮಾಡಿದ್ದ. ಇದೆಲ್ಲಾ ಅವಳಿಗೆ ತಿಳಿಯದ ವಿಷಯ.

ಹೋಟೆಲ್ಲಿನ ರೂಮಿನಲ್ಲಿ ಅವಳು ಅವನನ್ನು ಯಾವುದೇ ರೀತಿಯಲ್ಲೂ ವಿರೋಧಿಸದೇ ಅವನ ಕಾಮಕ್ಕೆ ಬಲಿಯಾಗುವವರೆಗೂ ಅವನು ಅವಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿದ್ದ. ಇದಕ್ಕಾಗಿ ಸಾಕಷ್ಟು ಪರಿಶ್ರಮವನ್ನು ಪಟ್ಟಿದ್ದ.

ಆದರೆ ಈಗ ತನ್ನಾಸೆ ಕೈಗೂಡಿದ ಮೇಲೆ ಮನಸ್ಸು ಅಸ್ತವ್ಯಸ್ತಗೊಂಡಿತ್ತು. ತಾನು ಮಾಡಿದ್ದು ಸರಿಯೆ? ತಾನು ಹೀಗೆ ಮೋಸ ಮಾಡಿದೆ ಎಂದು ತಿಳಿದರೆ ಅವಳು ತನಗೆ ಹತ್ತಿರವಾಗುವುದಿರಲಿ. ತನ್ನ ಮೇಲೆ ಕೇಸು ಹಾಕಲು ಹೇಸುವುದಿಲ್ಲ ಎಂದು ಗೊತ್ತಿತ್ತು. ಒಮ್ಮೆ ಎಲ್ಲವನ್ನು ತಿಳಿಸಿ ಕ್ಷಮೆ ಕೇಳಿ, ಅವಳಿಂದ ಬಹಳ ದೂರ ಹೊರಟು ಹೋಗಬೇಕೆನಿಸಿದರೆ, ಮರುಗಳಿಗೆಯೇ ಅವಳ ಅಭಿಮಾನಕ್ಕೆ ಪೆಟ್ಟು ಬಿದ್ದಿದೆ. ಅದರ ಪರಿಣಾಮ ಏನಾಗಬಹುದೆಂದು ತಿಳಿದುಕೊಳ್ಳಲೇ ಬೇಕೆಂದು ತವಕ ಹುಟ್ಟುತ್ತಿತ್ತು. ತನ್ನ ಬಳಿ ಈಗ ಸಾಕಷ್ಟು ಹಣ ಇದೆ. ಈಗ ತಾನು ಏನನ್ನು ಬೇಕಾದರೂ ಮಾಡಬಲ್ಲ ಶಕ್ತಿ ಇದೆ ಎಂದು ಅವಳಿಗೆ ತಿಳಿಸಿದಾಗ, ಅವಳ ಪ್ರತಿಕ್ರಿಯೆ ಹೇಗಿರುತ್ತದೆ ಎಂಬ ಕುತೂಹಲವೂ ಉಂಟಾಗುತ್ತಿತ್ತು. ಆದರೂ ಕೆಲವು ದಿನಗಳು ಈ ಗೊಂದಲದಿಂದ ದೂರವಿರುವುದೇ ಸರಿ ಎಂದುಕೊಂಡು ಹೋಟೆಲ್ಲಿನ ರೂಮನ್ನು ಖಾಲಿ ಮಾಡಿ ಬೇರೆ ಕಡೆಗೆ ಹೊರಟು ಹೋಗಿದ್ದ.

ಒಂದೆರಡು ತಿಂಗಳ ನಂತರ ಮತ್ತೆ ವಾಪಸ್ಸು ಬಂದು ಕಾಲೇಜಿನ ಬಳಿ ಅಡ್ಡಾಡಿದ. ಆದರೆ ಅವಳು ಕಾಣಲಿಲ್ಲ. ಕಾಲೇಜಿಗೆ ಹೋಗಿ ವಿಚಾರಿಸಿದಾಗ ಅವಳು ರಜದ ಮೇಲಿರುವಳೆಂದು ತಿಳಿಯಿತು. ಈ ಹಿಂದೆ ತಾನು ಮಾಡಿದ ಟ್ರಿಕ್ಸ್‌ಗಳು ಬಾಲಿಶವಾಗಿ ಕಂಡವು. ತನ್ನ ಈ ಕೃತ್ಯದಿಂದ ಅವಳಿಗೆ ಅವಮಾನವಾಗಿರಬಹುದು. ರಜ ಹಾಕಿ ಮನೆಯಲ್ಲೇ ಕುಳಿತಿರಬಹುದಾದ ಸ್ಥಿತಿ ಒದಗಲು ತಾನೇ ಕಾರಣ. ತಾನು ಈಗಲೇ ಹೋಗಿ ಅವಳೊಡನೆ ಮಾತನಾಡಿ, ಅವಳು ಬೇಸರ ಪಡುವ ಕಾರಣವಿಲ್ಲವೆಂದು ತಿಳಿಸಿದರೆ ಹೇಗೆ ಎಂದುಕೊಂಡರೂ ಧೈರ್ಯ ಬರಲಿಲ್ಲ.

ಎದುರಿಗೆ ಹೋಗಿ ಮಾತನಾಡುವುದು ಬೇಡ, ಫೋನು ಮಾಡಿದರೆ ಆಗುತ್ತದೆ ಎಂದುಕೊಂಡು, ಅವಳ ನಂಬರನ್ನು ಪಡೆದುಕೊಂಡು, ಅವಳ ಮನೆಗೆ ಫೋನು ಮಾಡಿದ. ಅವಳೇ ಫೋನಿನಲ್ಲಿ ಮಾತನಾಡಿದಳು.

"ನಾನು, ಶಶಿಧರ, ನಾನು ನಿನ್ನ ಹತ್ರ ಸ್ವಲ್ಪ ಮಾತನ್ನಾಡಬೇಕಾಗಿತ್ತು" ಅಂತಂದ. ತಕ್ಷಣವೇ ಅವಳು ಫೋನನ್ನಿಟ್ಟು ಬಿಟ್ಟಿದ್ದಳು. ಇವನಿಗೆ ಭಯವಾಗಿತ್ತು. ತಾನೇ ಇವನು ಅಂತ ಇವಳಿಗೆ ಗೊತ್ತಾಗಿರಬಹುದೇ... ತನ್ನ ಮೇಲೆ ಅಸಹ್ಯ ಹುಟ್ಟಿರಬಹುದೇ ಅಂತೆನಿಸಿ, ಸುಮ್ಮನಾಗಿ ಬಿಟ್ಟ. ಅವಳ ತಿರಸ್ಕೃತ ನೋಟಕ್ಕೆ ಒಳಗಾಗುವ ಮನಸ್ಸಿಲ್ಲದೇ ಅವಳನ್ನು ಭೇಟಿಯಾಗುವ ವಿಷಯವನ್ನು ಕೈ ಬಿಟ್ಟ.

* * * * *

ತಾನು ಗರ್ಭಿಣಿ ಎಂದು ತಿಳಿದಾಗಿನಿಂದ ಶಶಿರೇಖಾ ಏನೋ ಆತಂಕಕ್ಕೆ ಒಳಗಾಗಿದ್ದಳು. ಮದುವೆಯಾದ ಮೊದಲ ರಾತ್ರಿ ಆಗಾಗ್ಗೆ ನೆನಪಿಗೆ ಬರುತ್ತಿತ್ತು.

ಗಂಡನನ್ನು ತಿರಸ್ಕಾರದಿಂದ ನೋಡಿ, ಅಹಂಕಾರದಿಂದ ಅವನನ್ನು ರೂಮಿನಿಂದ ಹೊರಗೆ ಕಳುಹಿಸಿದ ಸಮಯ ನೆನೆಪಿಗೆ ಬರುತ್ತಿತ್ತು. ಅವನು ತನ್ನ ಅಧಿಕಾರವನ್ನು ಚಲಾಯಿಸಿ ತನ್ನನ್ನು ಬಲಾತ್ಕರಿಸಬಹುದಾಗಿತ್ತು. ಆದರೆ ಹಾಗೆ ಮಾಡದೇ ವಿಧೇಯನಂತೆ ಹೊರಟು ಹೋಗಿದ್ದ.

ಆದರೆ ತಾನೀಗ ಯಾರದೋ ಬಲತ್ಕಾರಕ್ಕೆ ಒಳಗಾಗಿ, ಆ ಪಾಪದ ಪಿಂಡವನ್ನು ಒಡಲಲ್ಲಿ ಬೆಳೆಸುತ್ತಿದ್ದೇನೆ. ಬೆಳೆಯುತ್ತಿರುವಂತೆ ಮಮಕಾರಕ್ಕೆ ಒಳಗಾಗುತ್ತಿದ್ದೇನೆ. ಇದು ಪಾಪವಲ್ಲವೆ?... ಈಗ ತನ್ನ ಗಂಡ ತನ್ನ ಜೊತೆಗಿದ್ದಿದ್ದರೇ... ಕಡೇ ಪಕ್ಷ ತಾನು ಅಪವಾದಕ್ಕೆ ಗುರಿಯಾಗುತ್ತಿರಲಿಲ್ಲ. ಈಗ ಅವನು ಎಲ್ಲಿದಾನೋ..? ತನ್ನ ಬಗ್ಗೆ ತಿಳಿದರೆ ಏನನ್ನಿಸುತ್ತದೋ? ತನ್ನನ್ನು ಈ ರೀತಿಯಲ್ಲಿ ಒಪ್ಪಿಕೊಳ್ಳಲು ಖಂಡಿತಾ ಸಾಧ್ಯವಿಲ್ಲ. ನನ್ನ ಅಹಂಕಾರಕ್ಕೆ ತಕ್ಕ ಶಾಸ್ತಿಯ್ಞಾಯಿತೆಂದು ಹಂಗಿಸದೇ ಬಿಡುವನೆ? ಆದರೂ.... ಅವನೊಮ್ಮೆ ಸಿಕ್ಕಿದರೆ? ಅವನೊಡನೆ ಎಲ್ಲವನ್ನು ಹೇಳಿಕೊಂಡು ಹೃದಯವನ್ನು ಹಗುರ ಮಾಡಿಕೊಳ್ಳುವಂತಿದ್ದರೇ...

ಅದೇ ಸಮಯದಲ್ಲಿ ಅವನು ಫೋನಿನಲ್ಲಿ ಮಾತಾಡಿದ್ದ. ನಿನ್ನೊಡನೆ ಮಾತನ್ನಾಡಬೇಕೆಂದಿದ್ದ. ಭಯದಿಂದ ಅವಳು ರಿಸೀವರ್‌ನ್ನಿಟ್ಟು ಬಿಟ್ಟಿದ್ದಳು. ಸ್ವಲ್ಪ ಭಯ ಕಡಿಮೆ ಆದ ನಂತರ... ತಾನು ಹಾಗೆ ಮಾಡಬಾರದಾಗಿತ್ತೆನಿಸಿ, ಮತ್ತೆ ಆತನು ಫೋನು ಮಾಡಬಾರದೇ... ಎಂದು ಕಾಯತೊಡಗಿದಳು.

ದಿನದಿನಕ್ಕೆ ಗರ್ಭ ಬೆಳೆಯುತ್ತಿತ್ತು. ನೋಡಿದವರಿಗೆ ಗರ್ಭಿಣಿ ಎಂದು ತಿಳಿಯುವಷ್ಟರ ಮಟ್ಟಿಗೆ ದಪ್ಪಗಾಗಿದ್ದಳು. ಅತ್ತಿಗೆಯರು ಕೇಳಿದಾಗ, ಏನೋ ಒಂದು ಸುಳ್ಳು ಹೇಳಿದ್ದಳು. ಹೀಗೇ ಎಷ್ಟು ದಿನ ಮುಚ್ಚಿಡಲಾಗುತ್ತದೆ. ಒಂದಲ್ಲ ಒಂದು ದಿನ, ಒಡಲೊಳಗಿನ ಮಗು ಹೊರಬರಲೇ ಬೇಕು. ಆಗ ನಾನು ಕೇಳಿದವರಿಗೆ ಏನು ಉತ್ತರ ಕೊಡಲಿ? ಅವನೊಮ್ಮೆ ಬರಬಾರದೇ.. ಚಡಪಡಿಸಿದಳು.

ಒಂದು ದಿನ ಮಧ್ಯಾಹ್ನ ಊಟದ ನಂತರ ಬಾಲ್ಕನಿಯಲ್ಲಿ ಅಡ್ಡಾಡುತ್ತಿದ್ದಳು. ಗೇಟು ತೆರೆದ ಸದ್ದಾಯಿತು. ಒಬ್ಬ ವ್ಯಕ್ತಿ ಒಳಗೆ ಬರುತ್ತಿದುದನ್ನು ಕಂಡಳು. ಸೂಟು ಬೂಟು ಧರಿಸಿದ್ದ ವ್ಯಕ್ತಿಯ ಕೈಯಲ್ಲಿ ಒಂದು ಬ್ರೀಫ್‌ಕೇಸ್ ಇತ್ತು. ಅವನು ಮುಂಬಾಗಿಲಿಗೆ ಬಂದು ಬೆಲ್ ಮಾಡುವ ಮೊದಲೇ ಕೆಳಗಿಳಿದು ಬಂದಿದ್ದಳು. ಒಳ ಬಂದ ವ್ಯಕ್ತಿಯನ್ನು ಅವಳು ತಕ್ಷಣಕ್ಕೆ ಗುರುತಿಸಲಿಲ್ಲ.

"ಹೇಗಿದೀಯಾ ರೇಖಾ?" ಅವನು ಕೇಳಿದಾಗ ಅವನ ಗುರುತು ಸಿಕ್ಕಿತ್ತು. ಎರಡು ಹೆಜ್ಜೆ ಹಿಂದೆ ಸರಿದಳು.

"ಹೆದರಬೇಡ ರೇಖಾ.. ನಾನು ಡೈವೋರ್ಸ್ ಪೇಪರ್ಸ್ ತಂದಿದೀನಿ. ಅದಕ್ಕೆ ಸಹಿ ಮಾಡಿಕೊಡು. ನಾನು ಹೊರಟು ಹೋಗ್ತೀನಿ."

"ನಾನು ಇಲ್ಲಿದೀನಿ ಅಂತ ನಿಮಗೆ ಹೇಗೆ ಗೊತ್ತಾಯ್ತು?"

"ನಮ್ಮ ಲಾಯರ್ರು ಪತ್ತೆ ಹಚ್ಚಿದರು" ಎನ್ನುತ್ತಾ ಬ್ರೀಫ್‌ಕೇಸಿನಿಂದ ಪತ್ರಗಳನ್ನು ತೆಗೆದ. ಅವಳು ಗೋಡೆಗೊರಗಿ, ಉಸಿರು ಬಿಗಿ ಹಿಡಿದು ನಿಂತಳು.

"ಏನಾಯ್ತು ರೇಖಾ.. ಹುಷಾರಿಲ್ವಾ?"

"ಡೈವೋರ್ಸ್‌ಗೆ ನಾನು ಒಪ್ಪದಿದ್ದರೇ..." ಅವಳು ಕಷ್ಟ ಪಟ್ಟು ನುಡಿದಳು.

"ನೀನು ಕೊಡಲೇ ಬೇಕು. ನಾನು ಎಷ್ಟು ವರ್ಷ ಹೀಗೇ ಒಂಟಿಯಾಗಿರಲಿ? ನಾನೀಗ ಹಣವಂತನಾಗಿದೀನಿ. ನನಗೆ ಸರಿ ಹೊಂದುವಂತಹವಳನ್ನು ಮದುವೆಯಾಗ್ತೀನಿ."

"ಪ್ಲೀಸ್, ಕೂತ್ಕೊಳ್ಳಿ. ನಾನು ಸ್ವಲ್ಪ ಮಾತಾಡ್ಬೇಕು"

"ಈಗ ಏನು ಉಳಿದಿದೆ ರೇಖಾ? ನನ್ನಿಂದ ನಿನಗೆ ಮೋಸ ಆಯ್ತು. ನಾನು ನಿನಗೆ ತಕ್ಕವನಲ್ಲ."

"ನಾನು ಅದೆಲ್ಲವನ್ನು ಮರೆತಿದೀನಿ... ನನ್ನನ್ನು ಕ್ಷಮಿಸಿ ಬಿಡಿ"

"ಒಂಟಿ ಜೀವನ ಬೇಸರವಾಯ್ತೆ? ನೀನು ಮತ್ತೆ ಮದುವೆಯಾಗಬಹುದು"

"ಇಲ್ಲ ನನಗೆ ಆ ಯೋಗವಿಲ್ಲ. ನಾನು ಪವಿತ್ರಳಾಗಿಲ್ಲ. ನನ್ನನ್ನು ಒಬ್ಬ ಪಾಪಿ ಕೆಡಿಸಿ ಬಿಟ್ಟ" ಅವನು ಬೆವೆತ. ಬ್ರೀಫ್‌ಕೇಸನ್ನು ಕಾಣದಂತೆ ಇಟ್ಟ.

"ಏನು ಹೇಳ್ತಿದೀಯಾ ನೀನು? ನಿನ್ನನ್ನು ಕೆಡಿಸುವ ಧೈರ್ಯ ಯಾರಿಗಿದೆ?"

"ನಾನು ಮತ್ತೊಮ್ಮೆ ಮೋಸ ಹೋದೆ" ಎನ್ನುತ್ತಾ ನಡೆದುದನ್ನು ತಿಳಿಸಿದಳು. "ನಾನೀಗ ಆರು ತಿಂಗಳ ಗರ್ಭಿಣಿ. ಈಗಾಗಲೇ ನಮ್ಮ ಮನೆಯವರು ಪ್ರಶ್ನಿಸುತ್ತಿದ್ದಾರೆ. ಈ ಕಳಂಕವನ್ನು ಹೊತ್ತು ನಾನು ಬದುಕಿರಬೇಕಾಗಿದೆ."

"ನೀನು ಗರ್ಭಿಣಿ!.." ಅವನ ಮುಖ ಅರಳಿತ್ತು. ಇದು ತನ್ನದೇ ಮಗು. ನಿಂತಿದ್ದವಳ ಗರ್ಭದ ಕಡೆ ಗಮನ ಹರಿಯಿತು. ಅವಳು ಸಂಕೋಚದಿಂದ ಮುದುರಿ ನಿಂತಳು. ತಾನೇ ಈ ಮಗುವಿನ ತಂದೆ ಎಂದು ಕಿರುಚಿ ಹೇಳುವ ಬಯಕೆಯಾದರೂ ತಡೆದುಕೊಂಡ. ಅವನು ಮಾತನಾಡದೇ ಸುಮ್ಮನೆ ನಿಂತಾಗ, ಅವಳು ಅವನ ಕಾಲಿಗೆ ಬೀಳುವುದರಲ್ಲಿದ್ದಳು. ಅವನು ಎತ್ತಿ ನಿಲ್ಲಿಸಿದ.

"ನನ್ನನ್ನು ಕ್ಷಮಿಸಿ ಬಿಡಿ. ನನ್ನದು ತಪ್ಪಾಯಿತು"

"ಈಗ ನನ್ನ ನೆನಪಾಗ್ತಿದೆಯಾ ರೇಖಾ?" ವ್ಯಂಗ್ಯದಿಂದ ಕೇಳಿದ.

"ನೀವು ನನ್ನೊಂದಿಗೆ ಇದ್ದಿದ್ದರೇ.. ನನಗೆ ಈ ಸ್ಥಿತಿ ಒದಗುತ್ತಿರಲಿಲ್ಲ"

ನಿನ್ನೊಂದಿಗೆ ಇಲ್ಲದಿದ್ದರೂ ಈ ಸ್ಥಿತಿ ಒದಗಿದೆ ಎಂದು ಹೇಳಬೇಕೆಂದು ಕೊಂಡರೂ ಹೇಳಲಾಗದೇ ನಕ್ಕ.

"ಯಾಕೆ ಸುಮ್ಮನಾಗಿ ಬಿಟ್ಟಿರಿ? ನನ್ನನ್ನು ಕ್ಷಮಿಸೋಲ್ವಾ?"

"ನಾನು ಸ್ವಲ್ಪ ಯೋಚಿಸ್ಬೇಕು ರೇಖಾ... ತಕ್ಷಣಕ್ಕೆ ಏನು ಹೇಳಲಿ?"

"ಸರಿ, ಕೂತ್ಕೊಳ್ಳಿ. ಅಡಿಗೆ ಮಾಡಿದ್ದು ಮಿಕ್ಕಿದೆ. ಊಟ ಮಾಡೋರಂತೆ"

"ಈ ಮನೇಲಿ ನೀನೊಬ್ಬಳೇ ಇದೀಯಾ? ಯಾಕೆ?"

"ಅಪ್ಪ ಅಮ್ಮ ಇಲ್ಲ. ಅಣ್ಣ ಅತ್ತಿಗೆಯರು ಅವರವರ ಪಾಡಿಗೆ ಅವರಿದಾರೆ. ನಾನೀಗ ಒಂಟಿಯಾಗಿದೀನಿ. ನಾನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆಯಾಯಿತು" ಅವಳೊಂದಿಗೆ ಅವನೂ ಊಟದ ಮನೆಗೆ ಬಂದ. ಅವಳೇ ನಿಂತು ಬಡಿಸಿದಳು. ತೃಪ್ತಿಯಾಗುವಷ್ಟು ಉಂಡು ಎದ್ದ. ಸೋಫಾದ ಮೇಲೆ ಕುಳಿತು ಅವಳ ಚಲನ ವಲನಗಳನ್ನೇ ಗಮನಿಸಿದ. ಗರ್ಭಿಣಿ ಸ್ತ್ರೀಯ ನಡಿಗೆ ಎಷ್ಟು ಸೊಗಸು. ಮೊದಲಿಗಿಂತ ಚೆನ್ನಾಗಿ ಆಗಿದಾಳೆ. ಅಹಂಕಾರದ ಕಳೆ ಹೋಗಿದೆ. ತಾಯ್ತನದ ಕಳೆ ಎದ್ದು ಕಾಣ್ತಿದೆ. ಪಾಪ.. ನಾನೇ ಈ ಮೋಸಗಾರ ಅಂತ ಇವಳಿಗೆ ಗೊತ್ತಾಗಿಲ್ಲ. ಗೊತ್ತಾದರೆ ಏನನ್ನಬಹುದು? ಮತ್ತೊಮ್ಮೆ ತನ್ನನ್ನು ಈ ಮನೆಯಿಂದಾಚೆ ದಬ್ಬಬಹುದು. ಆಗ ಹೊಸದಾಗಿ ಮದುವೆಯಾಗಿದ್ದವಳಿಂದ ತಿರಸ್ಕೃತನಾಗಿದ್ದೆ. ಈಗ ಈ ನನ್ನ ಮಗುವಿನ ತಾಯಿಯಾಗುವವಳಿಂದ ಹೊರ ದಬ್ಬಿಸುಕೊಳ್ಳುವುದೆಂದರೆ..? ತಲೆ ಅಲ್ಲಾಡಿಸಿ ತನಗೆ ತಾನೇ ನಕ್ಕ.

"ಏನನ್ನು ಯೋಚಿಸ್ತಿದೀರಿ ಶಶಿಧರ್... ನನ್ನೊಂದಿಗೆ ಹೇಗೆ ಬಾಳುವುದು ಅಂತ ಯೋಚಿಸ್ತಿದೀರಾ?.. ಡೆಲಿವರಿ ಆಗುವವರೆಗೆ, ನಮ್ಮ ನಿಮ್ಮ ಸ್ನೇಹ ಇರಲಿ. ಆಮೇಲೆ ನಾನು ಡೈವೋರ್ಸ್ ಕೊಡ್ತೀನಿ. ನನ್ನ ಮಗುವಿಗೆ ಅಪ್ಪನ ಹೆಸರು ಬೇಕು.

"ಅಂದರೇ.. ನಾನು ನಿನಗೆ ಹುಟ್ಟಲಿರುವ ಮಗುವಿಗೆ ತಂದೆಯಾಗಬೇಕು. ಇದ್ಯಾವ ನ್ಯಾಯ? ನಾನು ಮಾಡಿದ ಮೋಸಕ್ಕೆ ಇಂಥಾ ಬೆಲೆ ಕೊಡಬೇಕಾಗುತ್ತದೆ ಅಂತ ನಾನು ಅಂದುಕೊಂಡಿರಲಿಲ್ಲ. ವಿಷಯ ಹೀಗೆ ಅಂತ ಗೊತ್ತಿದ್ದರೆ ನಾನಿಲ್ಲಿಗೆ ಬರುತ್ತಲೇ ಇರಲಿಲ್ಲ"

"ನನ್ನ ಅಹಂಕಾರದ ಪ್ರತಿಫಲ, ನಾನೇ ಅನುಭವಿಸ್ತೀನಿ. ಆದರೆ ಒಂದೇ ಒಂದು ಸಲ ಕ್ಷಮಿಸಿದೀನಿ ಅಂತ ಹೇಳಿ ಬಿಡಿ" ಕೈ ಮುಗಿದಳು. ಕಣ್ಣುಗಳು ತುಂಬಿ ಬಂದವು.

"ಗರ್ಭಿಣಿ ಸ್ತ್ರೀಯರು ಅಳಬಾರದು. ಒಡಲೊಳಗೆ ಮಗು ನೊಂದುಕೊಳ್ಳುತ್ತದೆ. ನಿನಗೆ ಮೋಸ ಮಾಡಿದ ಕಳ್ಳ ಸನ್ಯಾಸಿಯನ್ನು ಹುಡುಕಿಸಿ, ಪೋಲಿಸರಿಗೆ ಒಪ್ಪಿಸ್ತೀನಿ. ಆಗಲೇ ನನಗೆ ನೆಮ್ಮದಿ"

"ಬೇಡ, ಊರಿಗೆಲ್ಲಾ ಗೊತ್ತಾಗುತ್ತದೆ. ಇದುವರೆಗೂ ನಾನು ಯಾರಿಗೂ ಈ ವಿಷಯವನ್ನು ತಿಳಿಸಿಲ್ಲ. ಹಗಲೂ ರಾತ್ರಿ ನೀವೊಮ್ಮೆ ಬರಬಾರದೇ ಎಂದು ಹಂಬಲಿಸುತ್ತಿದ್ದೆ. ನನ್ನ ಮೊರೆ ದೇವರಿಗೆ ತಿಳಿಯಿತು. ನಿಮ್ಮನ್ನು ಕಳಿಸಿದ" ಅವನು ಮೀಸೆಯ ಅಡಿಯಲ್ಲಿ ನಕ್ಕ. ಅವಳ ಸ್ವಾರ್ಥತನ ಮಾತಿನಲ್ಲಿ ಎದ್ದು ಕಂಡಿತ್ತು.

ಈಗ ನಿಜವನ್ನು ತಿಳಿಸಿ, ಇವಳಿಂದ ತಿರಸ್ಕೃತನಾಗಿ ಮತ್ತೆಂದೂ ಬರದಿರುವಂತೆ ಹೊರಟು ಹೋಗಬಹುದು. ಅಥವಾ ಅವಳ ನಡತೆಯನ್ನು ಹೀಯಾಳಿಸಿ ಅಂದು

ಆಡಿ, ಅವಳ ಮನಸ್ಸು ಕಂದಿ ಹೋಗುವಂತೆ ಮಾಡಬಹುದು. ಆದರೆ ಯಾವುದು ಸರಿ! ಎರಡೂ ಸರಿಯಲ್ಲ. ಇದರಿಂದ ಇಬ್ಬರೂ ಹತ್ತಿರವಾಗುವುದು ಸಾಧ್ಯವಿಲ್ಲ. ಈಗ ಇವಳು ಹೇಗೂ ತಗ್ಗಿದ್ದಾಳೆ. ಕ್ಷಮಿಸಿದಂತೆ ನಟಿಸಿ, ಇವಳನ್ನು ಹತ್ತಿರ ಮಾಡಿಕೊಂಡರೇ ತನಗೇ ಲಾಭ ಎಂದು ಯೋಚಿಸಿದ.

"ಹೋಗಲಿ ಬಿಡಿ. ನನ್ನ ಹಣೆಬರಹಕ್ಕೆ ಏನು ಮಾಡ್ತೀರಿ? ಯಾವ ಗಂಡನೇ ಆಗಲಿ, ಅಪವಿತ್ರ ಹೆಂಗಸನ್ನು ಹೇಗೆ ಒಪ್ಪಿಕೊಳ್ತಾನೆ? ನಾನು ನಿಮಗೆ ಅವಮಾನ ಮಾಡಿದ್ದನ್ನು ನೀವು ಮರೆತು ಬಿಡುವುದೂ ಸುಲಭವಲ್ಲ. ಆದರೆ ಒಂದೇ ಭಯ ಆ ಸನ್ಯಾಸಿ ಬಂದು, ನನ್ನ ಮಗುವನ್ನು ಕಿತ್ತುಕೊಂಡು ಹೋಗಿ ಬಿಟ್ಟರೇ? ನನ್ನ ಒಂಟಿತನವನ್ನು ಕಳೆಯಲು ಮಗುವಾದರೂ ಇರಲಿ"

"ಅವನನ್ನೇ ಮದುವೆಯಾಗಿ ಬಿಡು. ನಾನು ಹುಡುಕಿಸಿ ಕರೆ ತರ್ತೀನಿ"

"ಅವನೊಬ್ಬ ಕಳ್ಳ, ಮೋಸಗಾರ, ನೀಚ. ಅವನೊಡನೆ ಸಂಸಾರ.. ಅದರ ಬದಲು ಬಾವಿಗೆ ಬೀಳುವುದು ವಾಸಿ" ಅವಳು ಆಕ್ರೋಶದಿಂದ ನುಡಿದಾಗ ಅವನು ಮೆತ್ತಗಾದ. ಬ್ರೀಫ್‌ಕೇಸ್‌ನೊಳಕ್ಕೆ ಪತ್ರಗಳನ್ನು ತುರುಕಿದ. ಅವಳು ಬ್ರೀಫ್‌ಕೇಸನ್ನು ಗುರುತಿಸಿರಬಹುದೇ ಅಂತಂದುಕೊಂಡಾಗ ಕೈ ನಡುಗಿತ್ತು.

"ಯಾಕೆ ಒಂಥರಾ ಇದೀರಿ? ನನ್ನ ಮಾತಿನಿಂದ ನೀವು ಗೊಂದಲಗೊಂಡಿರುವಂತಿದೆ. ನಿಮಗೆ ನಾನು ಬಲವಂತವಂತೂ ಮಾಡುವುದಿಲ್ಲ. ಆದರೆ ಒಂದು ಮಾತನ್ನು ನಾನು ಹೇಳಲು ಇಷ್ಟ ಪಡ್ತೀನಿ. ಆ ಮೊದಲ ರಾತ್ರಿಯಂದು, ನೀವು ಬಲವಂತವಾಗಿಯಾದರೂ ನನ್ನನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳಬೇಕಾಗಿತ್ತು. ಆಗ ಖಂಡಿತಾ ಈ ದುಸ್ಥಿತಿ ಬರುತ್ತಿರಲಿಲ್ಲ" ಅವನನ್ನೇ ಕುರಿತು ಆಡಿದಂತಿತ್ತು.

"ಹೌದು ರೇಖಾ... ಆದರೆ ಆಗ ಬಲವಂತ ಮಾಡುವ ಸಮಯ ಅದಾಗಿರಲಿಲ್ಲ. ನೀನು ನನ್ನ ಪತ್ನಿಯಾಗಿದ್ದೆ. ನಿನ್ನನ್ನು ಪ್ರೀತಿಯಿಂದ ಒಲಿಸಿಕೊಳ್ಳುವ ಉತ್ಸಾಹದಲ್ಲಿದ್ದೆ. ನಿನ್ನ ಅಹಂಕಾರದ ಮಾತುಗಳು ನನ್ನನ್ನು ಹಿಂಸಿಸಿದವು. ನಿನ್ನ ತಿರಸ್ಕಾರದ ನೋಟ ತಲೆ ತಗ್ಗಿಸುವಂತೆ ಮಾಡಿತ್ತು. ನಿನಗೆ ಹಣವೇ ಅಷ್ಟು ಮುಖ್ಯ ಆಗಿತ್ತಾ? ಈಗ ನನ್ನ ಬಳಿ ಬೇಕಾದಷ್ಟು ಹಣ ಇದೆ. ಆದರೆ ನೀನಿಲ್ಲ. ಅದೇ ಈಗಿನ ವ್ಯಥೆ"

"ಹೌದು.... ನನಗೀಗ ಬುದ್ಧಿ ಬಂದಿದೆ. ಅಹಂಕಾರ ಇಳಿದಿದೆ. ಈ ಒಡಲಿನ ಭಾರ ನನ್ನನ್ನು ಕುಗ್ಗಿಸಿದೆ. ನನಗೀಗ ಆಸರೆ ಬೇಕು. ಅದನ್ನು ನೀವು ಕೊಡ್ತೀರಿ ಅಂತ ಅಂದುಕೊಂಡಿದ್ದೆ. ಆದರೆ ಅದೂ ಸರಿ ಅಲ್ಲ ಅಂತ ಅನ್ನಿಸ್ತಿದೆ. ಇನ್ನು ಯಾವ ಮಾತೂ ಬೇಡ. ಹೊರಟು ಹೋಗಿ. ನನ್ನ ಪಾಡಿಗೆ ನನ್ನನ್ನು ಬಿಡಿ ಹೇಗೋ ಇರ್ತೀನಿ" ಅವಳು ತೀರಾ ಹತಾಶಳಾಗಿ ನುಡಿದಾಗ ಅವನ ಅಂತರಂಗ ನಕ್ಕಿತು.

ಸರಿ ರೇಖಾ... ನೀನೀಗ ತುಂಬಾ ಬದಲಾಗಿದೀಯ ಅಂತ ಅರಿವಾಗ್ತಿದೆ. ಒಬ್ಬ ಸ್ತ್ರೀ ಸಮಾಜದಲ್ಲಿ ಕಳಂಕವನ್ನು ಹೊತ್ತು ಬದುಕುವುದು ಅಸಾಧ್ಯವಾಗುತ್ತದೆ. ಬಹುಶಃ ಅರಿತೋ, ಅರಿಯದೆಯೋ ನನ್ನಿಂದಲೂ ತಪ್ಪಾಗಿದೆ. ನನ್ನಿಂದ ನಿನಗೆ

ಮೋಸವಾದದ್ದು ನಿಜ. ನೀನು ಮತ್ತೆ ಮೋಸಕ್ಕೆ ಒಳಗಾಗಿದ್ದು ನನ್ನ ಕಾರಣದಿಂದಲೇ. ಅದನ್ನು ನಾನೀಗ ಸರಿ ಪಡಿಸಲೇ ಬೇಕು. ಇಲ್ಲದಿದ್ದರೆ ಮನುಷ್ಯನಾಗಲು ನನಗೆ ಅರ್ಹತೆಯೇ ಇಲ್ಲ. ನೀನು ಬದಲಾಗಿರುವಾಗ ನಾನೇಕೆ ಬದಲಾಗಬಾರದು? ನಾನು ಈ ಮಗುವಿನ ತಂದೆ. ಅದು ನಿಜ"

"ಅಂದರೆ ನಿಮಗೆ ಒಪ್ಪಿಗೆಯೇ?"

"ಹೂಂ. ನನಗೆ ಒಪ್ಪಿಗೆ. ಆದರೆ ಒಂದು ಕಂಡೀಷನ್. ನಾವು ಇಲ್ಲಿರುವುದು ಬೇಡ. ನಮ್ಮ ಮನೆಗೆ ಹೋಗೋಣ. ಅಲ್ಲಿ ನಮ್ಮದೇ ಪುಟ್ಟ ಸಂಸಾರ. ನಾನು. ನೀನು ಮತ್ತೆ ಈ ಮಗು" ಅವಳ ಉಬ್ಬಿದ ಹೊಟ್ಟೆಯ ಕಡೆ ಬೆರಳು ತೋರಿಸಿದ. ಅವಳ ಮುಖ ಕೆಂಪಾಗಿತ್ತು.

"ಯಾವಾಗ ಹೋಗೋಣ?"

"ಇವತ್ತೇ ಹೋಗೋಣ. ನಿನ್ನ ಬಟ್ಟೆಗಳನ್ನು ಪ್ಯಾಕ್ ಮಾಡ್ಕೋ. ನಾನು ಟ್ಯಾಕ್ಸಿಯನ್ನು ತರ್ತೀನಿ"

"ನೀವು ಹೋಗ್ಬೇಡಿ. ನಾನು ಮತ್ತೆ ನಿಮ್ಮನ್ನು ಕಳಿಸುವ ಧೈರ್ಯ ನನಗಿಲ್ಲ. ಮನೆಯಿಂದಲೇ ಫೋನು ಮಾಡೋಣ"

"ಯಾಕೆ? ನನ್ನ ಮೇಲೆ ನಂಬಿಕೆ ಇಲ್ಲವಾ?"

"ನನಗೆ ಗೊತ್ತಿಲ್ಲ. ಕಳೆದು ಹೋದವರು ಮತ್ತೆ ಸಿಕ್ಕಿದೀರಿ. ಕ್ಷಣ ಹೊತ್ತು ನಿಮ್ಮಿಂದ ದೂರವಿರಲು ಭಯ. ನಾನು ಸ್ವಾರ್ಥಿಯಾಗಿ ಬಿಟ್ಟೆ"

"ನಾನೂ ಒಂಥರಾ ಸ್ವಾರ್ಥಿಯೇ" ಎಂದು ತನ್ನಲ್ಲೇ ಹೇಳಿಕೊಂಡು ಅವಳನ್ನು ತನ್ನ ಬಳಿ ಕೂರಿಸಿಕೊಂಡ. "ನನ್ನನ್ನು ಕ್ಷಮಿಸು ರೇಖಾ" ಮನದಲ್ಲೇ ಹೇಳಿಕೊಂಡ.

* *

# ಅರಿವು ಮೂಡಿದಾಗ

**ಸಂ**ತೋಷ ಸರ್ಕಾರಿ ಸೈನ್ಸ್ ಕಾಲೇಜಿನಲ್ಲಿ ಕಡೆಯ ವರ್ಷದ ಬಿ.ಎಸ್ಸಿ. ತರಗತಿಯಲ್ಲಿ ಓದುತ್ತಿದ್ದ. ರೈತ ಕುಟುಂಬದ ಮನೆಯವನಾಗಿದ್ದ. ಹಳ್ಳಿಯಲ್ಲಿ ಅವನ ಮನೆ ಇತ್ತು. ತಂದೆ ತಾಯಿ ಅಲ್ಲಿಯೇ ವಾಸವಾಗಿದ್ದರು. ಅವನಿಗೆ ಯಾರೂ ಸ್ನೇಹಿತರಿರಲಿಲ್ಲ. ಒಂಟಿಯಾಗಿರುತ್ತಿದ್ದ. ಪುಸ್ತಕಗಳನ್ನು ಓದುವುದೇ ಅವನ ಹವ್ಯಾಸ. ಓದು ಮುಗಿಸಿ, ಹಳ್ಳಿಗೆ ಹೋಗಿ ಜಮೀನಿನ ಉಸ್ತುವಾರಿಯನ್ನು ನೋಡಿಕೊಂಡು ಅಲ್ಲಿಯೇ ನೆಲೆಸಬೇಕೆಂದು ಬಯಸುತ್ತಿದ್ದ. ಸಧ್ಯಕ್ಕೆ ಅವನ ಗಮನ ಓದಿನಲ್ಲಿ ಇತ್ತು. ಬೇರೆ ವಿಷಯಗಳಿಗೆ ಗಮನ ಕೊಡುತ್ತಿರಲಿಲ್ಲ.

ಅದೇ ಕಾಲೇಜಿನಲ್ಲಿ ಮೊದಲನೇ ವರ್ಷದ ಬಿ.ಎಸ್ಸಿ. ತರಗತಿಯಲ್ಲಿ ಸುಹಾಸಿನಿ ಓದುತ್ತಿದ್ದಳು. ಅವಳು ಬಡ ಕುಟುಂಬಕ್ಕೆ ಸೇರಿದವಳು. ಅವಳ ಆಸ್ತಿ ಎಂದರೆ, ಅವಳ ರೂಪ. ನಿಸರ್ಗವಿತ್ತ, ನೈಜ ಸೌಂದರ್ಯದಿಂದ ಎಲ್ಲರ ಮಧ್ಯೆ ಎದ್ದು ಕಾಣುತ್ತಿದ್ದಳು. ಅವಳಿಗೆ ಕಾಲೇಜಿಗೆ ಸೇರಿ, ಓದುವುದು ಇಷ್ಟವಿರಲಿಲ್ಲ. ಬಡವರ ಮನೆಯವಳೆಂದು ಉಳಿದವರು ಕೀಳಾಗಿ ಕಾಣಬಹುದೆಂಬ ಕೀಳರಿಮೆ. ಹಾಗೇ ತನ್ನನ್ನು ಬೇರೆಯವರು ದುರುಪಯೋಗ ಪಡಿಸಿಕೊಳ್ಳಬಹುದೆಂಬ ದಿಗಿಲು. ಹಾಗಾಗಿ ಅವಳೂ ಒಂಟಿಯಾಗಿರಲು ಬಯಸುತ್ತಿದ್ದಳು. ಅವಳಾಯಿತು, ಅವಳ ಓದಾಯಿತು. ಅವಳ ತರಗತಿಯಲ್ಲಿ ಓದುತ್ತಿದ್ದ ಉಳಿದ ಹುಡುಗಿಯರು ಗುಂಪು ಗುಂಪಾಗಿರುತ್ತಿದ್ದರು. ಹರಟೆ, ನಗು, ಷೋಕಿಗಳಲ್ಲಿ ಕಾಲವನ್ನು ಕಳೆಯುತ್ತಿದ್ದರು. ಅವರು ತಮ್ಮ ಗುಂಪಿಗೆ ಸುಹಾಸಿನಿಯನ್ನು ಸೇರಿಸಿಕೊಳ್ಳಲು ಶತ ಪ್ರಯತ್ನ ಪಟ್ಟಿದ್ದರು. ಅವಳು ಶ್ರೀಮಂತರ ಮನೆಯವಳಲ್ಲ ಎಂದು ತಿಳಿದಾಗ, ಅವಳಿಗೆ ಕಿರುಕುಳ ಕೊಡಬೇಕೆಂದು ತೀರ್ಮಾನಿಸಿದ್ದರು. ಆದ್ದರಿಂದ ಸ್ನೇಹವನ್ನು ನಟಿಸಿ, ಅವಳ ಗೆಳೆತನವನ್ನು ಸಂಪಾದಿಸಿದ್ದರು. ಅವರುಗಳಿಗೆ ತಿರುಗಾಡುವ, ಷಾಪಿಂಗ್ ಮಾಡುವ ಅಭ್ಯಾಸ.

ಒಂದು ದಿನ, ಎಲ್ಲರೂ ಕಾಲೇಜಿಗೆ ಸಮೀಪದಲ್ಲಿದ್ದ ಆಭರಣದ ಅಂಗಡಿಯನ್ನು ಹೊಕ್ಕರು. ಬೆಲೆ ಬಾಳುವ, ಝುಗಿಝುಗಿಸುವ ಸುಂದರವಾದ ಸರಗಳ ಕಡೆ ಅವರ ಗಮನ ಹರಿದಿತ್ತು. ಅಂಗಡಿಯವನು ಒಂದೊಂದೇ ಸರಗಳನ್ನು ತೆಗೆದು ತೋರಿಸುತ್ತಿದ್ದ. ಆ ಸಂದರ್ಭದಲ್ಲಿ, ಮಾಯಾ ಎಂಬುವಳು ಬೆಲೆ ಬಾಳುವ ಒಂದು ಸರವನ್ನು ಯಾರಿಗೂ ಕಾಣದಂತೆ ಎತ್ತಿಟ್ಟುಕೊಂಡು, ಸುಹಾಸಿನಿ ನಿಂತಿದ್ದೆಡೆಗೆ ಬಂದಳು.

ಮಾತನಾಡಿಸುತ್ತಾ ಮೆಲ್ಲಗೆ ಅವಳಿಗೆ ತಿಳಿಯದಂತೆ, ಆ ಸರವನ್ನು ಸುಹಾಸಿನಿಯ ಪರ್ಸಿನೊಳಕ್ಕೆ ಹಾಕಿಬಿಟ್ಟಳು. ಆದರೆ, ಅದನ್ನು ದೂರದಲ್ಲಿ ನಿಂತಿದ್ದ ಅಲ್ಲಿಯ ಸೇಲ್ಸ್ ಹುಡುಗನಾಗಿದ್ದ ನರಹರಿ ಗಮನಿಸಿದ್ದ. ಆದರೆ ಅದನ್ನು ಅವನು ಗಂಭೀರವಾಗಿ ಪರಿಗಣಿಸಲಿಲ್ಲ. ಆ ನಂತರ ಯಾವುದನ್ನು ಖರೀದಿಸದೇ ಆ ಅಂಗಡಿಯಿಂದ ಹೊರಬಿದ್ದರು. ಎಲ್ಲರೂ ಅವರವರ ಮನೆಗೆ ತೆರಳಿದರು.

ಮಾಯಾ, ಆಭರಣದ ಅಂಗಡಿಗೆ ಫೋನು ಮಾಡಿ, ಸುಹಾಸಿನಿ ಎಂಬ ಹುಡುಗಿ ನಿಮ್ಮ ಅಂಗಡಿಯಿಂದ ಸರವನ್ನು ಕದ್ದಿದ್ದಾಳೆ ಎಂದು ತಿಳಿಸಿ, ಸರದ ವಿಷಯವನ್ನು ತಿಳಿಸಿ, ಸುಹಾಸಿನಿಯ ಬಗ್ಗೆಯೂ ತಿಳಿಸಿದ್ಧಳು.

ಅಂಗಡಿಯ ಮಾಲೀಕ ರಂಗಯ್ಯ ಶೆಟ್ಟಿಗೆ ವಿಷಯ ತಿಳಿಯಿತು. ಆಭರಣಗಳನ್ನು ಪರಿಶೀಲಿಸಿದರು. ಸರ ನಾಪತ್ತೆಯಾಗಿತ್ತು. ಅಂಗಡಿಯಲ್ಲಿದ್ದ ಕೆಲಸಗಾರರನ್ನು ಮೊದಲಿಗೆ ವಿಚಾರಿಸಿದರು. ಯಾರೂ ತಮಗೇನೂ ತಿಳಿಯದೆಂದರು. ಕಾಲೇಜಿನ ಹುಡುಗಿಯರು ಬಂದ ಸಮಯದಲ್ಲೇ ಸರ ನಾಪತ್ತೆಯಾಗಿರಬಹುದು ಎಂದುಕೊಂಡು ಫೋನಿನ ವಿಷಯ ನಿಜವಿರಬಹುದೆಂದು ಊಹಿಸಿದರು. ನರಹರಿ ತಾನು ಕಂಡದ್ದನ್ನು ಹೇಳಲು ಇಚ್ಛಿಸದೇ ಸುಮ್ಮನಿದ್ದು ಬಿಟ್ಟ.

ರಂಗಯ್ಯ ಶೆಟ್ಟಿ ಒಂದಿಬ್ಬರು ಸೇಲ್ಸ್ ಹುಡುಗರೊಂದಿಗೆ ಕಾಲೇಜಿಗೆ ಬಂದರು. ಪ್ರಿನ್ಸಿಪಾಲರೊಡನೆ ಮಾತನಾಡಿದರು. ಶ್ರೀಮಂತ ವ್ಯಾಪಾರಿ ಒಬ್ಬ ತಮ್ಮ ಕಾಲೇಜಿನ ಆವರಣಕ್ಕೆ ಬಂದಿರುವುದೇ ಹೆಗ್ಗಳಿಕೆ ಎಂಬಂತೆ ಪ್ರಿನ್ಸಿಪಾಲರು ಅತಿ ವಿನಯದಿಂದ ಮಾತನಾಡಿಸಿದರು.

ನೆನ್ನೆ ದಿನ ನಮ್ಮ ಜ್ಯುಯೆಲರಿ ಅಂಗಡಿಗೆ ನಿಮ್ಮ ಕಾಲೇಜಿನ ಕೆಲವು ಹುಡುಗಿಯರು ಬಂದಿದ್ದರು. ಅವರ ಪೈಕಿ ಸುಹಾಸಿನಿ ಎಂಬ ಹುಡುಗಿಯೊಬ್ಬಳು ಇಪ್ಪತ್ತು ಸಾವಿರ ರೂಪಾಯಿ ಬೆಲೆ ಬಾಳುವ ಸರವನ್ನು ಅಪಹರಿಸಿದ್ದಾಳೆ ಅಂತ ತಿಳಿಯಿತು. ಆ ಹುಡುಗಿಯನ್ನು ಕರೆಸಿ, ಅವಳು ಆ ಸರವನ್ನು ವಾಪಸ್ಸು ಕೊಟ್ಟು ಬಿಡುವಂತೆ ಬುದ್ಧಿವಾದ ಹೇಳಿ. ಇಲ್ಲದಿದ್ದರೆ ಪೋಲೀಸ್ ಕಂಪ್ಲೆಂಟ್ ಕೊಡಬೇಕಾಗುತ್ತೆ.

ಪ್ರಿನ್ಸಿಪಾಲ್‌ರ ಮುಖ ಕುಂದಿತು. ಕಾಲೇಜಿಗೆ ಕಳಂಕ ತರುವಂಥ ಕೆಲಸವನ್ನು ತಮ್ಮ ವಿದ್ಯಾರ್ಥಿನಿ ಮಾಡಿದ್ದಾಳೆಂದರೆ ಆ ಕ್ಷಣವೇ ಸುಹಾಸಿನಿಯನ್ನು ತಮ್ಮ ಆಫೀಸಿಗೆ ಕರೆಸಿಕೊಂಡರು. ಸುಹಾಸಿನಿಯ ಮುಖ ಪೆಚ್ಚಾಗಿತ್ತು. ಒಳಗೆ ಬಂದೊಡನೆ, ಪ್ರಿನ್ಸಿಪಾಲರು ಹೇಳಿದರು.

"ಇವರು ರಂಗಯ್ಯ ಶೆಟ್ಟಿ ಅಂತ. ಆಭರಣಗಳ ಅಂಗಡಿಯನ್ನಿಟ್ಟಿದ್ದಾರಂತೆ. ನೆನ್ನೆಯ ದಿನ ನೀನು ಇವರ ಅಂಗಡಿಗೆ ಹೋಗಿದ್ದೆಯಾ?"

ಅವಳು ಶೆಟ್ಟಿಯ ಕಡೆ ನೋಡಿದಳು. ಅವರು ತಪ್ಪಿತಸ್ಥಳನ್ನು ನೋಡುವಂತೆ ನೋಡುತ್ತಿದ್ದರು. ಮುಖ ಬಿಳುಪೇರಿತು.

"ಹೌದು ಸಾರ್, ನಾನು ನನ್ನ ಸಹಪಾಠಿಗಳೊಂದಿಗೆ ಹೋಗಿದ್ದೆ. ಆದರೆ ನಾವು ಏನನ್ನು ಕೊಂಡು ಕೊಳ್ಳಲಿಲ್ಲ."

"ಆದರೆ ನೀನು ಸರವನ್ನು ಕದ್ದಿದ್ದೀಯ ಅಂತ ಇವರು ಹೇಳ್ತಿದಾರಲ್ಲ"

"ಇಲ್ಲ ಸಾರ್... ನಾನು ಅಂಥಾ ಕೆಲಸವನ್ನು ಮಾಡಿಲ್ಲ" ಕಣ್ಣೀರು ಧುಮುಕಿತ್ತು. ಗಂಟಲು ಕಟ್ಟಿತ್ತು.

"ಯಾರೋ, ನೀನು ಕದ್ದಿದ್ದನ್ನು ನೋಡಿದಾರೆ. ನೀನು ಹೆದರಬೇಡ. ಯಾರಿಗೂ ಈ ವಿಷಯವನ್ನು ತಿಳಿಸುವುದಿಲ್ಲ. ಇವರಿಗೆ ವಾಪಸ್ಸು ಕೊಟ್ಟು ಬಿಡು. ಈ ವಿಷಯ ಇಲ್ಲಿಗೇ ಮುಗಿಯಲಿ."

"ನನ್ನನ್ನು ನಂಬಿ ಸಾರ್... ನಾನು ಕದ್ದಿಲ್ಲ"

"ನಮಗೆ ನಿನ್ನ ಮೇಲೆ ನಂಬಿಕೆ ಇದೆ ಕಣಮ್ಮ. ಆದರೂ ಏನೋ ಆಸೆಯಿಂದ ತೆಗೆದಿಟ್ಟುಕೊಂಡಿರಬಹುದು ಅನ್ನೋ ಅನುಮಾನ ಅಷ್ಟೇ. ನೀನೀಗ ತಂದುಕೊಡದಿದ್ದರೆ, ಫಜೀತಿಗೆ ಒಳಗಾಗ್ತೀಯ ಅಷ್ಟೇ."

"ಹಾಗಾದ್ರೆ ನಾನು ಈಗ ಏನು ಮಾಡ್ಬೇಕು. ನೀವೇ ಹೇಳಿ ಸಾರ್"

"ನೀನು ನಿನ್ನ ಮನೆಯಲ್ಲಿ ಮುಚ್ಚಿಟ್ಟಿರಬಹುದೆಂಬ ಅನುಮಾನ ಇವರಿಗಿದೆ. ಇವರ ಈ ನಂಬಿಕಸ್ಥ ಆಳು ನಿನ್ನೊಂದಿಗೆ ನಿನ್ನ ಮನೆಗೆ ಬರ್ತಾನೆ. ನೀನೇ ಎಲ್ಲಿ ಇಟ್ಟಿದೀಯೋ, ತೆಗೆದುಕೊಟ್ಟು ಬಿಡು."

"ನಾನು ಕದ್ದಿಲ್ಲವೆಂದ ಮೇಲೆ ಮುಚ್ಚಿಡುವ ಮಾತೆಲ್ಲಿ? ನೆನ್ನೆ ನಾನು ತಂದಿದ್ದ ಹ್ಯಾಂಡ್ ಬ್ಯಾಗ್ ಮನೆಯಲ್ಲಿದೆ. ಅದನ್ನು ತಪಾಸಣೆ ಮಾಡಲಿ. ನನಗೆ ಯಾವ ಭಯವೂ ಇಲ್ಲ."

ರಂಗಯ್ಯ ಶೆಟ್ಟಿ ತಮ್ಮ ಕಾರಿನಲ್ಲಿ ಆ ವ್ಯಕ್ತಿಯೊಂದಿಗೆ ಸುಹಾಸಿನಿಯನ್ನು ಅವಳ ಮನೆಗೆ ಕಳುಹಿಸಿದರು. ಕಾರಿನಿಂದ ಇಳಿದವಳು ಅವಸವಸರವಾಗಿ ಬಂದುದನ್ನು ಕಂಡು ತಂದೆ ತಾಯಿಯರು ಗಾಬರಿಗೊಂಡರು.

"ಯಾಕಮ್ಮ... ಹೀಗೆ ಬಂದು ಬಿಟ್ಟೆ! ಯಾರದ್ದು ಕಾರು? ಏನು ವಿಷಯ?"

ಸುಹಾಸಿನಿ ಅಳುತ್ತಾ ನಡೆದ ವಿಷಯವನ್ನು ತಿಳಿಸಿದಳು. ಎಲ್ಲರೂ ಅವಳು ಪುಸ್ತಕಗಳನ್ನಿಟ್ಟಿದ್ದ ಕಪಾಟಿನ ಬಳಿಗೆ ಬಂದಳು.

"ಇದೇ.. ನೆನ್ನೆ ನಾನು ತಂದಿದ್ದ ಹ್ಯಾಂಡ್‌ಬ್ಯಾಗ್. ಇದರಲ್ಲೇನೂ ಇಲ್ಲ ಅಂತ ನೀವೇ ನೋಡಿ ಬಿಡಿ ಎಂದು ಕೆಲವು ಪುಸ್ತಕಗಳನ್ನು ಆಚೆ ತೆಗೆದಳು. ಅದರೊಂದಿಗೆ ಇದ್ದ ಸರ ದೊಪ್ಪನೆ ಕೆಳಗೆ ಬಿದ್ದ ಸದ್ದಾಯಿತು. ಅವಳು ಕಿರುಚಿಕೊಂಡಳು. ಅವಳ ಕಣ್ಣುಗಳು ಅವಳಿಗೇ ಮೋಸ ಮಾಡಿದ್ದವು.

"ಏನಮ್ಮಾ.. ಸುಹಾಸಿನಿ ! ಏನು ಮಾಡಿ ಬಿಟ್ಟೆ ನೀನು?" ತಂದೆ ಕೇಳಿದಾಗ ಅವಳು ಅಳುತ್ತಾ ಅವರ ಕೈಗಳನ್ನು ಹಿಡಿದಳು. ಜೊತೆಯಲ್ಲಿ ಬಂದಿದ್ದ ವ್ಯಕ್ತಿ ಸರವನ್ನು ಎತ್ತಿಟ್ಟುಕೊಂಡ.

"ನಂಗೊತ್ತಿಲ್ಲ ಅಪ್ಪ... ನನ್ನನ್ನು ನಂಬಿ..."

"ನಿನ್ನ ಮಾತನ್ನು ನಾವು ನಂಬ್ತೀವಿ. ಆದರೆ ಈ ಸರ ನಿನ್ನ ಪರ್ಸಿನಲ್ಲಿ ಹೇಗೆ ಬಂತು?... ನಿಜ ಏನು ನಡೀತು ಅಂತ ಹೇಳು."

"ನಾವು ಐದಾರು ಜನ ಸ್ನೇಹಿತೆಯರು ಅಂಗಡಿಗೆ ಹೋಗಿದ್ದೆವು. ಅಲ್ಲಿ ಯಾರೋ ಈ ಕೆಲಸವನ್ನು ಮಾಡಿದ್ದಾರೆ. ಬೇಕೂಂತ ನನ್ನ ಮೇಲೆ ಅಪವಾದವನ್ನು ಹೊರಿಸಿದ್ದಾರೆ."

"ಈ ವಿಷಯವನ್ನು ಪ್ರಿನ್ಸಿಪಾಲರಿಗೆ ಹೇಳೋಣ. ನಡೀ ನಾನೂ ನಿನ್ನ ಜತೆಯಲ್ಲಿ ಬರ್ತೀನಿ" ಕೆಟ್ಟ ಮುಖ ಮಾಡಿ ನಿಂತಿದ್ದ ತಾಯಿಗೆ ಹೇಳಿ, ಕಾರಿನಲ್ಲಿ ಹೊರಟರು.

ತಂದೆಯೂ ಜತೆಯಲ್ಲಿದ್ದುದರಿಂದ ಸುಹಾಸಿನಿ ಧೈರ್ಯವಾಗಿದ್ದಳು. ರಂಗಯ್ಯ ಶೆಟ್ಟಿಯ ಕಡೆಯ ವ್ಯಕ್ತಿ ಸರವನ್ನು ಟೇಬಲ್ಲಿನ ಮೇಲಿಟ್ಟು "ಇದು ಇವರ ಹ್ಯಾಂಡ್‌ಬ್ಯಾಗ್ ನಲ್ಲಿತ್ತು. ಅವರೇ ಹುಡುಕಿದಾಗ ಸಿಕ್ಕಿತು" ಎಂದ.

"ಏನಮ್ಮಾ... ಈಗೇನು ಹೇಳ್ತೀಯಾ?"

"ನಾನು ಖಂಡಿತಾ ಈ ಕೆಲಸವನ್ನು ಮಾಡಿಲ್ಲ ಸಾರ್... ಯಾರೋ ಬೇಕೂಂತ ಮಾಡಿರುವ ಕೆಲಸ ಇದು"

"ಹೌದು ಸಾರ್.. ನನ್ನ ಮಗಳು ಅಂಥೋಳಲ್ಲ. ಅವಳ ಜೊತೆ ಇದ್ದ ಸ್ನೇಹಿತೆಯರು ಯಾರಾದರೂ, ಇವಳ ಮೇಲಿನ ಹೊಟ್ಟೆ ಕಿಚ್ಚಿಗೆ ಮಾಡಿರಬಹುದು. ಅವರುಗಳನ್ನು ಕರೆಸಿ ವಿಚಾರಿಸಿದರೆ ನಿಜ ವಿಷಯ ತಿಳಿಯುತ್ತೆ."

"ನಿಮ್ಮ ಮಗಳ ಬಳಿ ಕಳೆದು ಹೋದ ವಸ್ತು ಸಿಕ್ಕಿದೆ. ನಿಮ್ಮ ಮಾತನ್ನು ನಂಬೋದು ಹೇಗೆ?"

"ನಾವು ಬಡವರು ಸಾರ್. ಸ್ವಾಭಿಮಾನಿಗಳು ನಮ್ಮ ಕೈಗೆ ಎಟುಕದ ವಸ್ತುವನ್ನು ನಾವು ಕಣ್ಣೆತ್ತಿ ಸಹ ನೋಡುವುದಿಲ್ಲ. ಶ್ರೀಮಂತ ಹುಡುಗಿಯರಿಗೆ ಇಂಥ ಹುಡುಗಾಟವನ್ನು ಆಡುವ ಚಪಲ. ದಯವಿಟ್ಟು ನನ್ನ ಮಾತನ್ನು ನಂಬಿ."

"ಆಯ್ತು.... ನಿನ್ನ ಜೊತೆ ಯಾರ್‍ಯಾರು ಬಂದಿದ್ದರು ಅಂತ ಹೆಸರುಗಳನ್ನು ಹೇಳು. ನಾನು ಅವರನ್ನು ವಿಚಾರಿಸ್ತೀನಿ. ನೀನು ಹೆದರಬೇಡ... ಹೋಗು" ಪ್ರಿನ್ಸಿಪಾಲರ ಮಾತು ಅವಳಲ್ಲಿ ಧೈರ್ಯವನ್ನು ಹುಟ್ಟಿಸಿತು. ಅವಳು ತಂದೆಯೊಂದಿಗೆ ಹೊರಟಳು.

ರಂಗಯ್ಯ ಶೆಟ್ಟಿ ಮತ್ತೆ ಸಿಕ್ಕ ಸರವನ್ನು ತನ್ನ ಕೋಟಿನ ಜೇಬಿಗೆ ಇಳಿಸಿದರು. "ತುಂಬಾ ಉಪಕಾರವಾಯ್ತು ಸಾರ್. ನನ್ನ ವಸ್ತು ನನಗೆ ಮತ್ತೆ ಸಿಕ್ಕಿತು. ಬಡವರ ಮನೆಯ ಹುಡುಗೀರ್ಗೆ ಆಸೆ ಜಾಸ್ತಿ ಸಾರ್. ಕೊಂಡ್ಕೊಳ್ಳೋಕೆ ಹಣ ಇರಲ್ಲ. ಕತ್ತಿಗೆ ಸರ ಹಾಕ್ಕೊಳ್ಳೋ ಆಸೆ..."

ಇಲ್ಲ ರಂಗಯ್ಯ ಶೆಟ್ಟಿಗಳೇ. ಸುಹಾಸಿನಿ ಅಂಥೋಳಲ್ಲ. ಅವರು ಬಡವರು ನಿಜ, ಕಳ್ಳತನ ಮಾಡೋರಲ್ಲ. ಸುಳ್ಳು ಹೇಳೋರಲ್ಲ.. ಏನೋ ನಡೆದಿದೆ ಆ ಹುಡುಗಿಯ ರೂಪವನ್ನು ನೋಡಿದಿರೋ ಇಲ್ಲವೋ? ಅವಳನ್ನು ಕಂಡರಾಗದ ಹುಡುಗಿ ಯಾರೋ ಈ ಕೆಲಸವನ್ನು ಮಾಡಿರಬೇಕು ಅಂತ ನನಗೂ ಬಲವಾಗಿ ಅನುಮಾನ ಬರ್ತಿದೆ. ನಾನು ಸರಿಯಾದ ರೀತಿಯಲ್ಲಿ ವಿಚಾರಿಸ್ತೀನಿ. ನನಗೆ ನಿಮ್ಮ ಸಹಕಾರವೂ ಬೇಕು."

"ನಾನು ಆ ಬಡ ತಂದೆಯ ಮುಖ ನೋಡಿ ಸುಮ್ಮನಾದೆ ಸಾರ್.. ಪೋಲಿಸರಿಗೆ ಕಂಪ್ಲೇಂಟ್ ಕೊಟ್ಟರೆ ಆ ಹುಡುಗಿಯ ಬಾಳು ಹಾಳಾಗುಲ್ವಾ! ನಾನೂ ಮನುಷ್ಯನೇ... ನನಗೂ ಇಬ್ಬರು ಹೆಣ್ಣು ಮಕ್ಕಳಿದಾರೆ."

"ಒಳ್ಳೆಯ ಕೆಲಸ ಮಾಡಿದಿರಿ ಶೆಟ್ಟರೇ. ಹುಡುಗಿಯ ಮಾನವನ್ನು ಉಳಿಸಿದಿರಿ. ಕಾಲೇಜಿನ ಗೌರವವನ್ನು ಉಳಿಸಿದಿರಿ. ಈ ಸಾರಿಯ ಯೂನಿಯನ್ ಡೇ ಸಮಾರಂಭಕ್ಕೆ ನಿಮ್ಮನ್ನೇ ಮುಖ್ಯ ಅತಿಥಿಯನ್ನಾಗಿ ಕರೆಸ್ತೀನಿ. ಬಂದು ಕುಳಿತು ನಮ್ಮ ಕಾಲೇಜಿನ ಬಗ್ಗೆ ನಾಲ್ಕು ಒಳ್ಳೆಯ ಮಾತುಗಳನ್ನಾಡಬೇಕು."

"ಆಯ್ತು... ನೀವು ಕರೆಯೋದು ಹೆಚ್ಚೋ... ನಾನು ಬರೋದು ಹೆಚ್ಚೋ" ಶೆಟ್ಟರು ಎದ್ದು ಕೈ ಮುಗಿದು ಹೊರಡಲನುವಾದರು.

"ನಿಮ್ಮ ಅಂಗಡಿಯ ಆಳು ಕಾಳುಗಳಿಗೆ ಎಚ್ಚರಿಕೆ ನೀಡಿ. ಇಂಥ ಪ್ರಸಂಗಗಳು ಮತ್ತೆ ಮತ್ತೆ ನಡೆಯಬಾರದು ನೋಡಿ."

"ನಾನು ಈಗಲೇ ಹೋಗಿ ವಿಚಾರಿಸ್ತೀನಿ. ಯಾರಾದರೂ ಬಾಯಿ ಬಿಡಬಹುದು" ಪ್ರಿನ್ಸಿಪಾಲರು ರಂಗಯ್ಯ ಶೆಟ್ಟಿಯನ್ನು ಕಳಿಸಿ ಕೊಟ್ಟು ಸುಸ್ತಾಗಿ ಕುಳಿತರು.

ಮನೆಗೆ ಹೋಗುವ ಮುನ್ನ ಮತ್ತೆ ಬಂದು ನನ್ನನ್ನು ಕಾಣಬೇಕೆಂದು ಸುಹಾಸಿನಿಗೆ ಹೇಳಿ ಕಳಿಸಿದರು.

* * * * *

ರಂಗಯ್ಯಶೆಟ್ಟಿ, ತಮ್ಮ ಅಂಗಡಿಯ ನೌಕರರನ್ನೆಲ್ಲಾ ಒಬ್ಬೊಬ್ಬರಾಗಿ ಬಂದು, ತಮ್ಮನ್ನು ಕಾಣಬೇಕೆಂದು ತಿಳಿಸಿ, ತಮ್ಮ ಒಳಗಿನ ಕೋಣೆಗೆ ತೆರಳಿದರು. ಒಬ್ಬೊಬ್ಬರನ್ನು, ಹಿಂದಿನ ದಿನ ನಡೆದ ವಿಷಯದ ಬಗ್ಗೆ ತಮಗೆ ಏನು ತಿಳಿದಿದೆಯೋ ಅದನ್ನು ಹೆದರದೇ ತಿಳಿಸಬೇಕೆಂದು ಕೇಳಿದರು. ನರಹರಿ ತನ್ನ ಸರದಿ ಬರುವವರೆಗೂ ಚಡಪಡಿಸುತ್ತಿದುದನ್ನು ಉಳಿದವರು ಗಮನಿಸಿದರು ಅವನ ಮೇಲೆಯೇ ಏನೋ ಅನುಮಾನ ಬರುವಂತಿತ್ತು.

ನಾನು ನರಹರಿ, ಕೇವಲ ಮೂರು ತಿಂಗಳ ಹಿಂದೆ ಈ ಅಂಗಡಿಗೆ ಬಂದು ಸೇರಿಕೊಂಡಿದೀನಿ ಎಂದು ತನ್ನ ಪರಿಚಯವನ್ನು ಹೇಳಿಕೊಂಡು, ಹಿಂದಿನ ದಿನ ತಾನು ಕಂಡಿದ್ದನ್ನು ವಿವರವಾಗಿ ಹೇಳಿದ. ನಾನು ಷೋಕೇಸ್‌ಗಳ ಗಾಜನ್ನು ಬಟ್ಟೆಯಿಂದ ಒರೆಸುತ್ತಿದ್ದೆ. ಆಗ ಕಾಲೇಜಿನ ಹುಡುಗಿಯರ ಗುಂಪೊಂದು ಅಂಗಡಿಯೊಳಗೆ ಬಂತು.

ನನ್ನ ಗಮನ ಆಗಾಗ್ಗೆ ಅವರ ಮೇಲೆ ಹರಿಯುತ್ತಿತ್ತು. ಒಮ್ಮೊಮ್ಮೆ ಕನ್ನಡಿಯೊಳಗಿನಿಂದ ಆ ಕಡೆ ನೋಡುತ್ತಿದ್ದೆ. ಅವಳಲ್ಲಿ ಅತಿ ಸಾಧಾರಣ ಉಡುಪಿನ, ಆದರೆ ನೋಡಲು ಸುಂದರಿಯಾಗಿದ್ದ ಹುಡುಗಿಯನ್ನು ಅನೇಕ ಭಾರಿ ನೋಡಿದೆ. ಅವಳು ಅತಿ ಗಂಭೀರಳಾಗಿದ್ದಳು. ಪ್ರತ್ಯೇಕವಾಗಿ ನಿಂತಿದ್ದಳು.

"ಅವಳು ಏನಾದರೂ ಕಳುವು ಮಾಡಿದ್ದನ್ನು ಕಂಡೆಯಾ?"

"ಇಲ್ಲ ಶೆಟ್ಟರೇ, ಅವಳು ಏನನ್ನು ಕದಿಯಲಿಲ್ಲ. ಯಾವುದೇ ಒಡವೆಯನ್ನು ಕೈಯಿಂದ ಸಹ ಮುಟ್ಟಿ ನೋಡಲಿಲ್ಲ. ಆದರೆ...." ಅವನು ತಡವರಿಸಿದ.

"ಆದರೆ.. ಏನಾಯ್ತು ಹೇಳು. ಅಂಗಡಿಯ ಕೆಲಸಗಾರರು ಯಾರಾದರೂ ಅವಳ ಕೈಗೆ ಒಡವೆಗಳನ್ನು ಕೊಟ್ಟರೇನು?.. ಏನು ಕಂಡೆ ನಿಜ ಹೇಳು."

"ಇಲ್ಲ ಸಾರ್... ಅಂಗಡಿಯ ನೌಕರರ್ಯಾರೂ ಅಂತಹವರಲ್ಲ. ಬಂದಿದ್ದ ಹುಡುಗಿಯರಲ್ಲಿ ಒಬ್ಬಳು, ಹಿಂದೆ ಹಿಂದೆ ಬಂದು, ಏನನ್ನೋ ಈ ಹುಡುಗಿಯ ಹ್ಯಾಂಡ್ ಬ್ಯಾಗ್‌ಗೆ ಹಾಕಿದ್ದನ್ನು ಕನ್ನಡಿಯಲ್ಲಿ ಕಂಡೆ. ಸರಿಯಾಗಿ ತಿರುಗಿ ನೋಡುವಷ್ಟರಲ್ಲಿ ಆ ಹುಡುಗಿ ಮತ್ತೆ ಗುಂಪಿನಲ್ಲಿದ್ದಳು. ಈ ಹುಡುಗಿ ಮಾತ್ರ ಹಾಗೇ ಏನನ್ನೋ ಯೋಚಿಸುತ್ತಿದ್ದವಳಂತೆ ನಿಂತಿದ್ದಳು. ಆಮೇಲೆ ಸ್ವಲ್ಪ ಹೊತ್ತಿನ ನಂತರ ಅವರೆಲ್ಲರೂ ಹೊರಟು ಹೋದರು.

"ನೆನ್ನೆಯೇ ಈ ವಿಷಯವನ್ನೇಕೆ ತಿಳಿಸಲಿಲ್ಲ...."

"ಒಡವೆ ಕಳುವಾಗಿದೆ ಅಂತ ನನಗೆ ತಿಳಿಯಲಿಲ್ಲ... ತಪ್ಪಾಯಿತು"

"ಸರಿ, ಸರಿ... ಆ ಹುಡುಗಿ ಯಾರೆಂದು ನೀನು ಗುರುತಿಸ ಬಲ್ಲೆಯಾ?"

"ಪ್ರಯತ್ನ ಪಡ್ತೀನಿ ಸಾರ್...."

"ಸರಿ, ನಾನು ನಿನ್ನನ್ನು ಕಾಲೇಜಿಗೆ ಕರೆದುಕೊಂಡು ಹೋಗ್ತೀನಿ. ಅಲ್ಲಿ ನೀನು ಪ್ರಿನ್ಸಿಪಾಲರ ಹತ್ತಿರ ಈಗ ಹೇಳಿದ್ದನ್ನೇ ಹೇಳಬೇಕು. ಕದ್ದ ಹುಡುಗಿಯನ್ನು ಗುರುತಿಸಬೇಕು."

"ದಯವಿಟ್ಟು ನನ್ನನ್ನು ಕೆಲಸದಿಂದ ತೆಗೆಯಬೇಡಿ. ಸಾರ್..."

"ಇಲ್ಲಯ್ಯಾ... ನಿನ್ನ ಕೆಲಸಕ್ಕೆ ಏನೂ ಖೋತಾ ಆಗೊಲ್ಲ. ಆದರೆ ಇನ್ನು ಮುಂದೆ ಹೀಗೆ ಬೇಜವಾಬ್ದಾರಿಯಿಂದ ಇರಬಾರದು. ಇಂಥದ್ದೇನಾದರೂ ಕಂಡರೆ ತಕ್ಷಣ ಮ್ಯಾನೇಜರ್‌ಗೆ ತಿಳಿಸಬೇಕು."

"ಆಯ್ತು ಸಾರ್... ನಾನಿನ್ನು ಬರ್ಲಾ...?"

"ನಿನ್ನ ಹೆಸರೇನು ಅಂತಂದೆ? ಏನೇ ಇರಲಿ... ನನ್ನ ಹತ್ತಿರ ಹೇಳಿದ್ದನ್ನು ಈಗಲೇ ಯಾರಿಗೂ ಹೇಳಬೇಡ. ನೆನಪಿರಲಿ" ನರಹರಿ ಗೋಣು ಆಡಿಸಿ ಹೊರ ಬಂದ.

* * * * *

ರಂಗಯ್ಯ ಶೆಟ್ಟರು ಮತ್ತೆ ನರಹರಿಯೊಂದಿಗೆ ಕಾಲೇಜಿಗೆ ಆಗಮಿಸಿದಾಗ ಪ್ರಿನ್ಸಿಪಾಲರು ಗಂಭೀರವನ್ನು ನಟಿಸಿದರು.

"ನೆನ್ನೆಗೇ ಎಲ್ಲಾ ಎನ್‌ಕ್ವೈಯರಿ ಮುಗಿದಿತ್ತಲ್ಲ ಶೆಟ್ಟರೇ..."

"ಈ ಹುಡುಗ ನಮ್ಮ ಅಂಗಡಿಯಲ್ಲಿ ಕೆಲಸದಲ್ಲಿದಾನೆ. ಅವನು ಸರವನ್ನು ಕದ್ದಿರುವ ಹುಡುಗಿಯನ್ನು ಕಂಡಿದ್ದಾನೆ. ನೆನ್ನೆ ಏನು ನೋಡಿದೆ ಅಂತ ಹೇಳೋ ನರಹರಿ..." ರಂಗಯ್ಯ ಶೆಟ್ಟರು ಕುರ್ಚಿಯ ಬೆನ್ನಿಗೆ ಒರಗಿ ಠೀವಿಯಿಂದ ಪ್ರಿನ್ಸಿಪಾಲರ ಕಡೆ ನೋಡಿದರು. ಪ್ರಿನ್ಸಿಪಾಲರಿಗೆ ಆ ನೋಟ ಹಿಡಿಸಲಿಲ್ಲ.

ನರಹರಿ ತಾನು ಕಂಡದ್ದನ್ನು ಚಾಚೂ ತಪ್ಪದೇ ಹೇಳಿ ಕೈಕಟ್ಟಿ ನಿಂತ.

ಪ್ರಿನ್ಸಿಪಾಲರು, ಸುಹಾಸಿನಿಯ ಕ್ಲಾಸಿನ ಹುಡುಗಿಯರು ತಮ್ಮ ಆಫೀಸಿಗೆ ಕರೆಸಿದರು. ಸುಹಾಸಿನಿ ಸಿಕ್ಕಿ ಬಿದ್ದಿದ್ದಾಳೆಂದೇ ಉಳಿದವರು ಭಾವಿಸಿದರು. ಕೆಲವರಿಗೆ ಅಯ್ಯೋ ಅಂತೆನ್ನಿಸಿತ್ತು. ಕೆಲವರಿಗೆ ಖುಷಿಯಾಗಿತ್ತು. ಹುಡುಗಿಯರು ಸಾಲಿನಲ್ಲಿ ನಿಂತರು. ನರಹರಿ ಒಬ್ಬೊಬ್ಬರನ್ನೇ ಆಳವಾಗಿ ನೋಡಿದ. ತುಟಿಯಂಚಿನಲ್ಲಿ ವಕ್ರವಾಗಿ ನಗುತ್ತಿದ್ದ ಮಾಯಾಳನ್ನು ಗುರುತಿಸಿದ. ಅವಳ ಕಡೆ ಬೊಟ್ಟು ಮಾಡಿದ.

"ಇವರೇ ಸಾರ್... ಸರವನ್ನು ಇವರ ಹ್ಯಾಂಡ್‌ಬ್ಯಾಗ್‌ಗೆ ಹಾಕಿದ್ದು..."

ಮಾಯಾಳ ಮುಖ ಅವಮಾನದಿಂದ ಕೆಂಪಾಯಿತು. ಅವನನ್ನೇ ದುರುಗುಟ್ಟಿಕೊಂಡು ನೋಡಿದಳು. "ಏನು ಹೇಳ್ತಿದೀಯ ನೀನು... ಶೆಟ್ಟರೇ ಮೊದಲು ಇವನನ್ನು ಕೆಲಸದಿಂದ ತೆಗೆದು ಹಾಕಿ... ನಾನು ಯಾರ ಮಗಳೆಂದು ಇವನಿಗೆ ಗೊತ್ತಿಲ್ಲ."

"ಷಟಪ್ ಮಾಯಾ... ಇವನು ನಿಜವನ್ನೇ ಹೇಳಿದಾನೆ. ನೀನು ಮಾಡಿರುವುದು ಅಪರಾಧ. ಸುಹಾಸಿನಿಯನ್ನು ಸಿಕ್ಕಿ ಹಾಕಿಸಿದರೆ, ನೀನು ಬಚಾವ್ ಆಗ್ತೀಯ ಅಂತ ತಿಳಿಯಬೇಡ. ನಾನು ಈಗಲೇ ನಿಮ್ಮ ತಂದೆಗೆ ಫೋನು ಮಾಡ್ತೀನಿ."

ಮಾಯಾ ಮೆತ್ತಗಾದಳು. ಆದರೂ ಸುಹಾಸಿನಿಯ ಕಡೆ ಕ್ರೂರ ನೋಟ ಬೀರಿದಳು. "ನಿಮ್ಮ ತಂದೆ ಭಾರಿ ಶ್ರೀಮಂತರಿರಬಹುದು. ಆದರೆ ಅವರು ಗುಣವಂತರು. ಅವರ ಮಗಳಾಗಿ ಅವರಿಗೆ ಅವಮಾನ ಮಾಡಲು ಹೊರಟಿದೀಯಲ್ಲ. ಅವರಿಗೆ ದುಃಖವಾಗಲ್ಲವಾ? ಇನ್ನು ಮೇಲೆ ಇಂಥಾ ಕೆಲಸ ಮಾಡಬೇಡಮ್ಮ..." ರಂಗಯ್ಯ ಶೆಟ್ಟರು ಹೇಳಿದಾಗ ಪ್ರಿನ್ಸಿಪಾಲರು ಅವರ ಕಡೆ ನೋಡಿದರು.

"ಹೌದು ಸಾರ್... ಅವರು ಹೆಸರಾಂತ ವ್ಯಕ್ತಿಗಳು. ನಮ್ಮ ಅಂಗಡಿಯಲ್ಲೇ ಒಡವೆಗಳನ್ನು ಖರೀದಿಸುತ್ತಾರೆ. ಬಿಟ್ಟು ಬಿಡಿ ಅತ್ಲಾಗೆ."

"ಏನು ಶೆಟ್ಟರೇ ಹೀಗೆ ಹೇಳ್ತೀರಿ. ಈ ಹುಡುಗಿಗೆ ಅವಮಾನವಾಗಿದೆ. ನಿಮ್ಮಿಂದ, ಇವಳಿಂದ... ನೀವು ಶ್ರೀಮಂತರನ್ನು ಹೀಗೆ ಬಿಟ್ಟು ಬಿಡ್ತೀರಲ್ಲ."

"ಏನು ಮಾಡೋದು? ನಮ್ಮ ವೃತ್ತಿ ಧರ್ಮ. ನಮ್ಮ ಬಿಸಿನೆಸ್‌ಗೆ ಖೋತಾ ಆಗುತ್ತಲ್ಲ.. ಹಾಗೇ ನಿಮ್ಮ ಕಾಲೇಜಿಗೂ ಕೆಟ್ಟ ಹೆಸರು ಬರುತ್ತಲ್ಲ..."

"ಕಾಲೇಜಿಗೆ ಕೆಟ್ಟ ಹೆಸರು ಬರುತ್ತೆ ಅಂತ ಸುಮ್ಮನಿರೋಕ್ಕೆ ಆಗುತ್ತಾ ಶೆಟ್ಟರೇ... ಈ ದಿನವೇ ಈ ಹುಡುಗಿಯ ಟಿ.ಸಿ. ಕೊಟ್ಟು ಕಳಿಸ್ತೀನಿ. ಇಂಥವರು ನಮ್ಮ ಕಾಲೇಜಿಗೆ ಕಳಂಕ."

"ಏನಮ್ಮ ಸುಮ್ಮನೇ ನಿಂತಿದೀಯ. ಕ್ಷಮೆ ಕೇಳು. ಪ್ರಿನ್ಸಿಪಾಲರು ಒಳ್ಳೆಯವರು. ನಿನ್ನ ಓದು ಹಾಳಾಗುತ್ತೆ."

"ನನ್ನನ್ನು ಕ್ಷಮಿಸಿ ಸಾರ್. ನಾನು ಇನ್ನು ಮುಂದೆ ಹೀಗೆ ಮಾಡುಲ್ಲ."

"ಹಾಗಂತ ಹತ್ತು ಸಾವಿರ ಸಲ ಬರೆದು ತಂದು ಕೊಡು. ನಿನಗೆ ಎರಡು ದಿನದ ಅವಧಿ ಕೊಡ್ತೀನಿ.." ಹಾಗೇ ನೀನು ಸುಹಾಸಿನಿಯನ್ನು ಕ್ಷಮೆ ಕೇಳಬೇಕು. ಅವಳ ಜೀವನವನ್ನೇ ಹಾಳು ಮಾಡಲು ನೋಡಿದ್ದೆಯಲ್ಲ.

"ಕೇಳೇ... ಕೇಳೇ..." ಉಳಿದವರು ಪಿಸುಗುಟ್ಟಿದರು.

"ಸಾರಿ ಸುಹಾಸಿನಿ... ನನ್ನಿಂದ ತಪ್ಪಾಯಿತು ಕ್ಷಮಿಸು" ಒಣಗಿದ ಧ್ವನಿಯಲ್ಲಿ ನುಡಿದಳು. ಸುಹಾಸಿನಿ ಸುಮ್ಮನೇ ನಕ್ಕಳು ಮಾತಾಡಲಿಲ್ಲ. ಆದರೆ ಈ ಗಳಿಗೆಯನ್ನು ಮಾಯಾ ಮರೆತಿರುವುದಿಲ್ಲ. ತಾನು ಆದಷ್ಟು ಎಚ್ಚರವಾಗಿರಬೇಕೆಂದು ಕೊಂಡು ಎಲ್ಲರಿಗೂ ಹೇಳಿ ಹೊರಬಂದಳು. ಎದುರಿಗೆ ಕಾರಿಡಾರಿನಲ್ಲಿ ಬಂದ ಸಂತೋಷನನ್ನು ಕಾಣದೇ ಅವನಿಗೆ ಡಿಕ್ಕಿ ಕೊಟ್ಟಳು. ಹ್ಹಾಂ... ಎನ್ನುತ್ತಾ ಕತ್ತೆತ್ತಿದಳು. ಎದುರಿಗೆ ನಿಂತಿದ್ದ ಯುವಕ ಮುಗುಳ್ನಕ್ಕ.

"ಏನ್ರೀ ಕಣ್ಣು ಮುಚ್ಚಿಕೊಂಡು ಬರ್ತಿದೀರಾ?... ಆರಡಿಯ ಆಳು ನಾನು ಕಾಣಲಿಲ್ವಾ?" ಗೇಲಿ ಮಾಡಿದ.

"ಸಾರಿ... ಏನೋ ಯೋಚಿಸ್ತಿದ್ದೆ"

"ಹುಡುಗೀರು ಹೆಚ್ಗೆ ಯೋಚಿಸ್ಬಾರ್ದು. ಹೀಗೆ ಅಪಘಾತವಾಗುತ್ತೆ" ಅವನು ನಗುತ್ತಾ ನುಡಿದಾಗ ಅವಳು ಮುಗುಳ್ನಕ್ಕಳು. ಅವನು ಅವಳ ಸೌಂದರ್ಯವನ್ನೇ ಆಸ್ವಾದಿಸಿದ. ಅವಳು ರಂಗೇರಿದಳು.

"ನಿಮಗೂ ಇಂಥಾ ಪರಿಸ್ಥಿತಿ ಒದಗಿದ್ರೆ ನೀವೂ ನಮ್ಮ ಹಾಗೇ ಯೋಚಿಸ್ತೀರಾ... ನೀವೂ ಮನುಷ್ಯರೇ ತಾನೇ?"

"ಅಂಥದ್ದೇನು ನಡೀತು ಅಂತ ಕೇಳಬಹುದಾ?"

"ಬೇಡ ಬಿಡಿ... ನಿಮಗ್ಯಾಕೆ ಹೇಳ್ಬೇಕು?..."

"ಸರಿ ಬಿಡಿ... ನಾನು ಬಲವಂತ ಮಾಡುವುದಿಲ್ಲ. ಆದರೆ ಎಂದಾದ್ರೂ ಹೇಳಬೇಕು ಅಂತ ಅನ್ನಿಸಿದ್ರೆ ದಯವಿಟ್ಟು ಹೇಳಿ. ಖಂಡಿತಾ ಕೇಳಿಸಿಕೊಳ್ತೀನಿ. ಕಿವಿಗಳನ್ನು ಮುಚ್ಚಿಕೊಳ್ಳುವುದಿಲ್ಲ." ಅವನು ತಮಾಷೆಯಾಗಿ ನಕ್ಕ. ಅವಳು ನಗಲಿಲ್ಲ. "ಓ.ಕೆ. ನಿಮ್ಮ ಮೂಡ್ ಚೆನ್ನಾಗಿಲ್ಲ. ಡಿಕ್ಕಿ ಕೊಟ್ಟಿದ್ದರಿಂದ ಭಾರಿ ನೋವಾಗುತ್ತಿರಬೇಕು. ಕ್ಯಾಂಟೀನಿಗೆ ಬರೋದಾದ್ರೆ ಬನ್ನಿ ಕಾಫಿ ಕುಡಿಯೋಣ."

"ಬೇಡ ಇವತ್ತು ಬೇಡ"

"ನಿಮ್ಮಿಷ್ಟ" ಎಂದು ಹೇಳಿ ಅವನು ಅಲ್ಲಿಂದ ಸರಿದು ಹೋದ. ಅವನು ಹೋದ ದಿಕ್ಕನ್ನೇ ಸುಹಾಸಿನಿ ನೋಡುತ್ತಾ ನಿಂತಿದ್ದಳು. ಎದುರಿನಿಂದ ಮಾಯಾ ಮತ್ತು ಅವಳ ಸ್ನೇಹಿತೆಯರು ಬಂದರು.

"ಏನೇ ಸುಹಾಸಿನಿ... ನನ್ನ ಹೆಸರನ್ನು ಪ್ರಿನ್ಸಿಪಾಲರಿಗೆ ಹೇಳಿ ನನಗೆ ಅವಮಾನ ಮಾಡ್ತೀಯಾ? ನಾನು ನಿನ್ನನ್ನು ಸುಮ್ಮನೇ ಬಿಡುಲ್ಲ."

"ನಾನಾಗಿಯೇ ನಾನು ಏನೂ ಮಾಡಿಲ್ಲ. ನಾನೇನು ಸುಳ್ಳು ಹೇಳಿಲ್ಲ. ತಪ್ಪೆಲ್ಲಾ ನಿನ್ನದೇ ಅಲ್ವಾ?"

"ನಿನಗೆಷ್ಟು ಧೈರ್ಯ! ನನ್ನನ್ನು ಎದುರು ಹಾಕಿಕೊಂಡಿದೀಯ. ಇನ್ನೆಷ್ಟು ದಿನ ಈ ಕಾಲೇಜಿನಲ್ಲಿರ್ತೀಯಾ ಅಂತ ನಾನೂ ನೋಡ್ತೀನಿ."

"ಮಾಯಾ... ನಿನ್ನ ಬೆದರಿಕೆಗೆ ನಾನು ಹೆದರೊಲ್ಲ.... ನಾನು ಪ್ರಿನ್ಸಿಪಾಲರಿಗೆ ಹೇಳಬೇಕಾಗುತ್ತದೆ.."

"ಹೇಳ್ಕೊ... ಅದೇನಾಗುತ್ತೋ ನಾನು ನೋಡ್ತೀನಿ. ನಿನಗೆ ನನ್ನ ಪವರ್ ಗೊತ್ತಿಲ್ಲ."

"ಗೊತ್ತಿದೆ, ನಿನ್ನ ಪವರ್ ಎಲ್ಲಾ. ಬಡವರ ಮನೆಯ ಹುಡುಗಿಯರನ್ನು ಗೋಳು ಹೊಯ್ದುಕೊಳ್ಳೊಕೆ ಅಂತ. ನಿನ್ನ ಶ್ರೀಮಂತಿಕೆ ನಿನಗಿರಲಿ, ನಿನ್ನಿಂದ ನಾನೇನೂ ಹಾಳಾಗುವುದಿಲ್ಲ. ನಮಗೂ ನಮ್ಮನ್ನು ರಕ್ಷಿಸುವ ವಿಧಾನಗಳು ಗೊತ್ತಿರುತ್ತೆ. ನಾವು ಪ್ರಾಮಾಣಿಕರು. ಯಾರಿಗೂ ಹೆದರಬೇಕಾಗಿಲ್ಲ."

"ಅತೀ ಮಾತಾಡ್ತಿದೀಯ. ಸಧ್ಯದಲ್ಲೇ ನಿನ್ನ ಗತಿ ಏನಾಗುತ್ತೆ ಅಂತ ನಿನಗೆ ತಿಳಿದಿಲ್ಲ. ನಾನು ನಿನ್ನಂಥೋರಿಗೆ ಎಷ್ಟೋ ಜನರಿಗೆ ಬುದ್ಧಿ ಕಲಿಸಿದೀನಿ.." ಅಷ್ಟರಲ್ಲಿ ಕೆಲವಾರು ವಿದ್ಯಾರ್ಥಿಗಳು ಕಾರಿಡಾರಿನಲ್ಲಿ ಸೇರಲಾರಂಭಿಸಿದರು. ಉಳಿದವರು ಮಾಯಾಳನ್ನು ಎಳೆದರು.

"ಈಗ ಸುಮ್ನೇ ಬಾರೇ ಮಾಯಾ... ನೋಡು ಜನ ಸೇರ್ತಿದಾರೆ. ಪ್ರಿನ್ಸಿಪಾಲರು ಮತ್ತೆ ಕರಿಸ್ತಾರೆ ಅಷ್ಟೇ..." ಬಲವಂತವಾಗಿ ಎಳೆದು ಕರೆದುಕೊಂಡು ಹೋದರು.

"ನೀವಿನ್ನು ಇಲ್ಲೇ ನಿಂತಿದೀರಾ? ಏನು ನಡೀತಿತ್ತು ಇಲ್ಲಿ?" ಸಂತೋಷ ಕೇಳಿದಾಗ ಸುಹಾಸಿನಿ ಮಾತಾಡಲಿಲ್ಲ. ಸಂತೋಷನ ಜತೆಯಲ್ಲಿದ್ದವನು ಪಿಸು ದನಿಯಲ್ಲಿ ಏನನ್ನೋ ನುಡಿದು, ಸುಹಾಸಿನಿಯ ಕಡೆ ತಿರುಗಿದ.

"ಬನ್ನಿ... ನೀವು ಇಲ್ಲಿಯೇ ನಿಂತಿರುವುದು ಸರಿಯಿಲ್ಲ" ಮೂವರೂ ಅಲ್ಲಿಂದ ನಡೆದರು.

* * * * *

ಸಂತೋಷನ ಸ್ನೇಹಿತ ಗಿರೀಶ. ಅವನು ಯೂನಿಯನ್ ಕಮಿಟಿಯಲ್ಲಿ ಮೆಂಬರ್ ಆಗಿದ್ದ. ಅವನು ತನಗೆ ತಿಳಿದುದನ್ನು ಸಂತೋಷನಿಗೆ ತಿಳಿಸಿದ.

ಮಾಯಾ, ಶ್ರೀಮಂತರ ಮನೆಯ ಹುಡುಗಿ. ಅವಳ ಅಪ್ಪನಿಗೆ ಹಣವಿದೆ, ಅಧಿಕಾರವಿದೆ. ಸುಹಾಸಿನಿ ತೆಪ್ಪಗಿರಬೇಕಾಗಿತ್ತು. ಮಾಯಾಳೊಂದಿಗೆ ವಿರೋಧವನ್ನು ಕಟ್ಟಿ ಕೊಂಡಿದಾಳೆ. ಸಂತೋಷನಿಗೂ ಅವನು ಹೇಳಿದ್ದು ಸರಿ ಎನಿಸಿತ್ತು. ಸುಹಾಸಿನಿಯ ನಡೆವಳಿಕೆ ತಪ್ಪಾಗಿ ಕಂಡಿತ್ತು. ಮಾಯಾಳಿಗೆ ಬೇಕೆಂದೇ ಅವಮಾನ ಮಾಡಿದಳೇನೋ ಅಂತ ಅಂದುಕೊಂಡ.

"ಬಡವರ ಮನೆಯವಳಾದರೂ, ಅಹಂಕಾರಕ್ಕೇನೂ ಕಡಿಮೆ ಇಲ್ಲ. ತಾನೇ ಸುಂದರಿ ಎನ್ನುವ ಜಂಭ ಬೇರೇ... ಸ್ನೇಹಿತ ಹೇಳಿದ್ದು ಸರಿ ಎನಿಸಿತ್ತು. ಸುಹಾಸಿನಿಯನ್ನು ಅವನು ತಪ್ಪಾಗಿ ಭಾವಿಸಿದ.

ಕಾಲೇಜಿನ ಯೂನಿಯನ್ ಡೇ ಸಮಾರಂಭ ಪ್ರಾರಂಭವಾಗಿತ್ತು. ಪ್ರಿನ್ಸಿಪಾಲರು ತಾವು ಹೇಳಿದ್ದಂತೆ ರಂಗಯ್ಯ ಶೆಟ್ಟರನ್ನು ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಿದ್ದರು. ಕಲಾಪಗಳು ಪ್ರಾರಂಭವಾಗಿದ್ದವು.

ಸುಹಾಸಿನಿಗೆ ಹೆಚ್ಚು ಅಂಕಗಳನ್ನು ಗಳಿಸಿದ್ದಕ್ಕಾಗಿ ಬಹುಮಾನ ಸಿಕ್ಕಿತ್ತು. ರಂಗಯ್ಯ ಶೆಟ್ಟರು ಸುಹಾಸಿನಿಯನ್ನು ಹೊಗಳಿದರು. ಮಾಯಾ ಉರಿದು ಹೋದಳು. ಸಂತೋಷ ತಿರಸ್ಕಾರದಿಂದ ಸುಹಾಸಿನಿಯನ್ನು ದಿಟ್ಟಿಸಿದ. ಅವಳ ಬಗ್ಗೆ ಅಸಹನೆ ಹೆಚ್ಚಾಯಿತು.

ಆ ವರ್ಷದ ಪರೀಕ್ಷೆಗಳು ಮುಗಿದಿದ್ದವು. ಸಂತೋಷ ತನ್ನ ಪರೀಕ್ಷೆ ಮುಗಿದ ಕೂಡಲೇ ತನ್ನ ಹಳ್ಳಿಗೆ ಹೊರಟು ಹೋಗಿದ್ದ. ಸುಹಾಸಿನಿಯನ್ನು ಮರೆತ.

* * * * *

ಸುಹಾಸಿನಿಯ ವಿದ್ಯಾಭ್ಯಾಸ ಮುಗಿದಿತ್ತು. ಅವಳ ಮದುವೆಗಾಗಿ ಗಂಡುಗಳನ್ನು ಹುಡುಕಲು ಪ್ರಾರಂಭಿಸಿದ್ದರು. ಹಳ್ಳಿಯಲ್ಲಿ ವಾಸವಾಗಿದ್ದುಕೊಂಡು ವ್ಯವಸಾಯದಲ್ಲಿ ನಿರತನಾಗಿದ್ದ ಸಂತೋಷನನ್ನು ಮನಸಾರೆ ಒಪ್ಪಿದಳು. ಸುಹಾಸಿನಿಯನ್ನು ಸಂತೋಷ ಒಪ್ಪಿಕೊಂಡ. ಅವರಿಬ್ಬರ ಮದುವೆ ನೆರವೇರಿತು.

ಆದರೆ ಸಂತೋಷ ಅವಳನ್ನು ದೂರವೇ ಇಟ್ಟ. ಅವಳನ್ನು ಸ್ವೀಕರಿಸಲಿಲ್ಲ. ಸುಹಾಸಿನಿಗೆ ಚಿಂತೆಯಾಯಿತು. ಅದಕ್ಕೆ ಕಾರಣ ಏನೆಂದು ತಿಳಿಯಲಿಲ್ಲ. ತಾನು ಬಡವರ ಮನೆಯವಳೆಂದು, ವರದಕ್ಷಿಣೆ ತರಲಿಲ್ಲವೆಂದು ಅಸಮಾಧಾನವಿರಬಹುದೆಂದು ಭಾವಿಸಿ, ಒಂದು ರಾತ್ರಿ ಕೇಳಿದಳು.

"ನನ್ನ ಮೇಲೆ ನಿಮಗ್ಯಾಕೆ ಅಸಹನೆ? ನಾನು ನಿಮ್ಮ ಹೆಂಡತಿ... ನನ್ನ ತಪ್ಪು ಏನೂಂತ ತಿಳಿಸಿ, ನಾನು ತಿದ್ದಿಕೊಳ್ತೀನಿ" ಅವನು ಮಾತಾಡಲಿಲ್ಲ.

"ಮದುವೆಯಾಗಿ ವಾರವಾಯಿತು. ನನ್ನನ್ನು ನೀವು ಪತ್ನಿ ಅಂತ ಒಪ್ಪಿಕೊಂಡಂತಿಲ್ಲ. ನನಗೆ ರೂಪವಿಲ್ಲವೆ? ಯೌವನ ಇಲ್ಲವೆ? ನನ್ನ ಕಡೆ ಕೂಡಾ ನೋಡುವುದಿಲ್ಲವಲ್ಲ. ಏನಾಗಿದೆ ನಿಮಗೆ?" ಅವನು ಮೌನವನ್ನು ನಟಿಸಿದ.

"ನನ್ನ ತಂದೆ ವರದಕ್ಷಿಣೆ ಕೊಟ್ಟಿಲ್ಲ ನಿಜ.. ಆದರೆ ನಿಮಗೇ ಗೊತ್ತು ನಾವು ಶ್ರೀಮಂತರಲ್ಲ. ನಿಮಗೆ ಈ ವಿಷಯ ತಿಳಿದಿತ್ತಲ್ಲವೆ?"

ಅವಳು ಅವನನ್ನು ತನ್ನ ಕಡೆಗೆ ತಿರುಗಿಸಿಕೊಂಡಳು "ಹೀಗ್ಯಾಕೆ ವರ್ತಿಸುತ್ತಿದೀರಿ ಹೇಳಿ. ನನ್ನಿಂದ ಯಾವ ತಪ್ಪು ನಡೆದಿದೆ. ನನಗ್ಯಾಕೆ ಈ ಶಿಕ್ಷೆ ನೀವು ಬೇರೆ ಯಾರನ್ನಾದರೂ ಪ್ರೀತಿಸುತ್ತಿದ್ದರೆ ಹೇಳಿ. ನಾನು ನಿಮ್ಮಿಂದ ದೂರ ಹೋಗ್ತೀನಿ."

"ಸಾಕು ಮಾಡು ನಿನ್ನ ಪ್ರಲಾಪವನ್ನು ಏನೂ ತಿಳಿಯದವಳಂತೆ ಮಾತಾಡ್ಬೇಡ. ಸುಮ್ಮನೇ ಮಲಕ್ಕೋ. ನಾನು ಹೇಳಿದಷ್ಟನ್ನು ಕೇಳುವುದನ್ನು ಕಲಿ" ಅವನು ಗಡುಸಾಗಿ ನುಡಿದಾಗ ಅವಳು ಎದ್ದು ಕೂತಳು.

"ನನ್ನ ತಪ್ಪು ಏನೂಂತ ತಿಳಿಯದೇ, ನಾನು ಸುಮ್ಮನಾಗುವುದಿಲ್ಲ. ನೀವು ಬದಲಾಗಿದೀರಿ. ಆ ದಿನ ನನ್ನ ಬಳಿ ಮಾತಾಡಿದ ಸಂತೋಷ್ ನೀವಲ್ಲ"

"ಹೌದು, ನಾನು ಬದಲಾಗಿದೀನಿ. ನನಗೆ ನಿನ್ನ ಮೇಲೆ ಕೋಪ ಇದೆ."

"ಆ ದಿನ ನಿಮ್ಮ ಜೊತೇಲಿ ಕ್ಯಾಂಟನಿಗೆ ಬರಲಿಲ್ಲ ಅಂತ ಕೋಪಾನಾ? ಅದಕ್ಕೆ ಇಷ್ಟು ದೊಡ್ಡ ಶಿಕ್ಷೇನಾ? ಯಾರಾದ್ರೂ ಕೇಳಿದ್ರೆ ನಗ್ತಾರೆ" ಅವಳು ನಕ್ಕಳು.

"ನೀನು ನಗ್ಬೇಡ, ನೀನು ಹಾಗ್ಯಾಕೆ ಮಾಡಿದೆ ಹೇಳು?... ಮಾಯಾಳ ಮೇಲೆ ನಿನಗ್ಯಾಕೆ ದ್ವೇಷ?"

"ಆ ಮಾಯಾಳ ಮಾತು ಈಗೇಕೆ? ಅವಳು ಸರಿ ಇರಲಿಲ್ಲ. ಅವಳೇನು ನಿಮ್ಮ ಸಂಬಂಧಿಯೆ? ಅವಳಿಗಾಗಿ ನನಗೇಕೆ ಶಿಕ್ಷೆ?"

"ಅವಳು ನನ್ನನ್ನು ಪ್ರೀತಿಸುತ್ತಿದ್ದಳು. ಈ ಹಗರಣವಾದ ನಂತರ ಅವಳು ನನ್ನಿಂದ ದೂರವಾದಳು. ನನ್ನ ಬಡತನ ಅವಳಿಗೆ ಅಸಹ್ಯವಾಗಿ ಕಾಣತೊಡಗಿತು. ಅದಕ್ಕೆ ನೀನೇ ಕಾರಣ."

ಆ ಶ್ರೀಮಂತ, ಅಹಂಕಾರದ ಹುಡುಗಿ ನಿಮ್ಮನ್ನು ಪ್ರೀತಿಸ್ತಿದ್ದಳಾ? ಖಂಡಿತಾ ಸುಳ್ಳು. ಅವಳಿಗೆ ಬಡವರನ್ನು ಕಂಡರೆ ಅಷ್ಟಕ್ಕಷ್ಟೆ. ನನಗೆ ಅವಮಾನ ಮಾಡಬೇಕೆಂದು ಕಳ್ಳತನದ ಅಪಾದನೆ ಹೊರಿಸಿದಳು. ನಾನು ಇದನ್ನು ನಿಮಗೆ ಹೇಳಲಿಲ್ಲ ಅಷ್ಟೇ. ನಿಮಗೆ ಹೇಗೆ ತಿಳೀತು.."

"ನಿನ್ನದೂ ತಪ್ಪಿತ್ತು. ಅದಕ್ಕೇ ಹೇಳಲಿಲ್ಲ. ನೀನು ಅವಳಿಗೆ ಅವಮಾನ ಮಾಡಿದೆಯಲ್ಲ"

"ನಾನು ಅವಳ ತಪ್ಪನ್ನು ಮುಚ್ಚಿಟ್ಟು, ನಾನು ಅಪರಾಧಿಯಂತೆ ತಲೆತಗ್ಗಿಸಿ ನಿಲ್ಲಬೇಕಾಗಿತ್ತಾ? ಯಾಕೆ ಬಡವರಿಗೆ ಮಾನ ಅಭಿಮಾನ ಏನೂ ಇರುವುದಿಲ್ಲವೆ? ಮಾಯಾ ನಿಜವಾಗಿಯೂ ನಿಮ್ಮನ್ನು ಪ್ರೀತಿಸುತ್ತಿದ್ದುದೇ ಆದರೆ, ನಿಮ್ಮನ್ನು ಯಾಕೆ ದೂರ ಮಾಡಿದಳು? ಅವಳು ಬಣ್ಣ ಬದಲಾಯಿಸುವ ಚಿಟ್ಟೆ. ಅವಳನ್ನು ಹೇಗೆ ನಂಬಿದಿರಿ?.. ಅವನು ಮಾತಾಡದೇ ಗೋಡೆಯ ಕಡೆ ತಿರುಗಿದ. ಅವಳು ನಿಟ್ಟುಸಿರು ಬಿಟ್ಟು ಇನ್ನೊಂದು ದಿಕ್ಕಿಗೆ ತಿರುಗಿ ಮಲಗಿದಳು.

* * * * *

ಬೇಸರಗೊಂಡ ಸುಹಾಸಿನಿ ತವರು ಮನೆಗೆ ಹೋಗಿ ವಾರದ ಮೇಲಾಗಿತ್ತು. ಸಂತೋಷನಿಗೆ ಮೊದ ಮೊದಲು ತಾನು ಮಾಡಿದ್ದೇ ಸರಿ ಎನಿಸಿತ್ತು. ಆದರೆ ಅವಳು ಆಡಿದ ಮಾತುಗಳನ್ನು ಮೆಲಕು ಹಾಕುವಾಗ, ಮಾಯಾಳ ವರ್ತನೆ ಸರಿಯಿರಲಿಲ್ಲ ಎನ್ನಿಸತೊಡಗಿತ್ತು. ಯೂನಿಯನ್ ಲೀಡರ್ ಆಗಿದ್ದ ಸಂತೋಷನನ್ನು ಮಾಯಾ ತಾನಾಗಿಯೇ ಬಂದು ಮಾತನಾಡಿಸುತ್ತಿದ್ದಳು. ತನ್ನ ಶ್ರೀಮಂತಿಕೆಯ ಪ್ರದರ್ಶನವನ್ನು ಬೀರುತ್ತಿದ್ದಳು. ಅವೆಲ್ಲಾ ಅವನಿಗೆ ಸೊಗಸಾಗಿ ತೋರುತ್ತಿತ್ತು. ಆದರೆ ಕ್ರಮೇಣ ಅವಳು ಅವನನ್ನು ದೂರ ಮಾಡತೊಡಗಿದಾಗ, ಅವನಿಗೆ ನಿಜವಾದ ಕಾರಣ ತಿಳಿಯಲಿಲ್ಲ. ಸ್ನೇಹಿತ ಹೇಳಿದಂತೆ ಸುಹಾಸಿನಿಯೇ ತಪ್ಪಾಗಿ ಕಂಡಳು.

ಅದೇ ಗುಂಗಿನಲ್ಲಿದ್ದವನಿಗೆ ಸುಹಾಸಿನಿಯನ್ನು ತೋರಿಸಿದಾಗ, ಅವಳಿಗೆ ನೋವನ್ನುಂಟು ಮಾಡಬೇಕೆಂದುಕೊಂಡು ಅವಳನ್ನು ಮದುವೆಯಾಗಿ, ಅವಳನ್ನು ತನ್ನಿಂದ ದೂರವೇ ಇಟ್ಟಿದ್ದ. ಪ್ರೀತಿಸಿದ ಮಾಯಾಳೂ ಇಲ್ಲ; ಮದುವೆಯಾದ ಸುಹಾಸಿನಿಯೂ ಹತ್ತಿರದಲ್ಲಿಲ್ಲ. ಒಂಟಿತನ ನೀರಸವಾಗಿ ಕಾಣತೊಡಗಿತು.

ನನಗೆ ಹೇಳದೇ ತವರಿಗೆ ಹೋಗಿದ್ದಾಳಲ್ಲವೆ? ಅವಳೇ ಬರಲಿ ಎಂದು ಕಾದ. ಹದಿನೈದು ದಿನಗಳು ಕಳೆದರೂ ಅವಳು ಬರುವ ಸೂಚನೆ ಇಲ್ಲ. ತಾಯಿಯೂ ಪದೇ ಪದೇ ಕೇಳುತ್ತಿದ್ದಳು. ಅವನು ದ್ವಂದ್ವದಲ್ಲಿ ಸಿಕ್ಕಿಬಿದ್ದ. ಒಂದು ಗಳಿಗೆ ತಾನು ಮಾಡಿದ್ದು ಸರಿ ಎನಿಸಿದರೆ, ಮರು ಗಳಿಗೆಯೇ ತಪ್ಪು ಎನಿಸುತ್ತಿತ್ತು. ಅವಳಾಗಿಯೇ ಬರಲಿ ಎಂದು ಮನಸ್ಸು ಹಂಬಲಿಸಿದರೆ, ತಾನೇ ಹೋಗಿ ಕರೆದುಕೊಂಡು ಬರಲು ಅಭಿಮಾನ ಅಡ್ಡ ಬರುತ್ತಿತ್ತು. ಮನುಷ್ಯನಿಗೆ ಮಾನ, ಅಭಿಮಾನ, ಸ್ವಾಭಿಮಾನ ಎಲ್ಲವೂ ಹೆಚ್ಚು ಎಂದು ಅವಳು ಹೇಳಿದ ಮಾತು ನೆನಪಾಗಿತ್ತು. ಸರ್ರನೆ ಯಾವುದೋ ಜ್ಞಾನದಲ್ಲಿ ಎದ್ದವನಿಗೆ ಕಿಟಕಿಯ ಬಾಗಿಲು ತಲೆಗೆ ಜೋರಾಗಿ ಹೊಡೆದಿತ್ತು. ಅಮ್ಮಾ... ಎಂದು ಕೆಟ್ಟದಾಗಿ ಕಿರುಚಿದ. ಗಾಯದಿಂದ ರಕ್ತ ಒಸರಲು ಪ್ರಾರಂಭವಾಯಿತು. ಜ್ಞಾನ ಹೋದಂತಾಗಿತ್ತು.

ಎಚ್ಚರವಾದಾಗ, ತಾನು ಆಸ್ಪತ್ರೆಯ ಕೊಠಡಿಯಲ್ಲಿ ಇರುವನೆಂದು ತಿಳಿಯಿತು. ಮಂದವಾದ ಬೆಳಕಿನಲ್ಲಿ ಮಗ್ಗುಲಲ್ಲಿ ಕುಳಿತಿರುವವಳು ಸುಹಾಸಿನಿಯಂತೆಯೇ ಕಂಡಳು. ಕಣ್ಣು ಮುಚ್ಚಿಕೊಂಡ. ತನಗೆ ಭ್ರಮೆ ಎಂದುಕೊಂಡ. ಆದರೆ ಅದು ಭ್ರಮೆಯಾಗಿರಲಿಲ್ಲ. ಸುಹಾಸಿನಿಯೇ ಕುಳಿತಿದ್ದವಳು.

"ಈಗ ಹೇಗಿದೀರಿ? ಇನ್ನು ನೋಯುತ್ತಿದೆಯಾ?" ಕೇಳಿದಳು.

"ನಿನಗೆ ಹೇಗೆ ತಿಳೀತು?... ಯಾವಾಗ ಬಂದೆ?"

"ಯಾಕೆ? ನನಗೆ ತಿಳಿಸಬಾರದು ಅಂತ ಹೇಳಿದ್ರಾ?"

"ಇಲ್ಲ, ಸುಹಾಸಿ... ನೀನು ಬಂದದ್ದೇ ಒಳ್ಳೆಯದಾಯ್ತು. ನಾನು ಮಾಡಿದ ತಪ್ಪಿಗೆ ಇದು ಶಿಕ್ಷೆ. ನಾನು ನಿನ್ನನ್ನು ನೋಯಿಸಿದೆ. ಈಗ ನಾನು ನೋವನ್ನು ಅನುಭವಿಸ್ತಾ ಇದೀನಿ."

"ಹೆಚ್ಚೆ ಏನೂ ಮಾತಾಡ್ಬೇಡಿ. ನೋವು ಕಡಿಮೆಯಾಗಲ್ಲ"

"ಹಾಗಾದ್ರೆ ನೀನೇ ಏನಾದ್ರೂ ಮಾತಾಡು. ನಾನು ಕೇಳಿಸಿಕೊಳ್ತೀನಿ"

"ಇದು ಆಸ್ಪತ್ರೆಯ ವಾರ್ಡ್. ನಮ್ಮ ಬೆಡ್ ರೂಂ ಅಲ್ಲ..."

"ನನ್ನನ್ನ ಮನೆಗೆ ಕರೆದುಕೊಂಡು ಹೋಗು ಸುಹಾಸಿ... ನಮ್ಮ ಬೆಡ್‌ರೂಂನಲ್ಲಿ ನಾವಿಬ್ರೇ ಇರಬೇಕು. ನಾನು ನಿನ್ನನ್ನು ತುಂಬಾ ಸತಾಯಿಸಿದೀನಿ. ಅದನ್ನೆಲ್ಲಾ ಸರಿ ಮಾಡ್ಬೇಕು."

"ಮೊದಲು ಡಾಕ್ಟರು ಬರಲಿ. ನೀವು ಹುಷಾರಾಗಿ. ಅದನ್ನೆಲ್ಲಾ ನಿಧಾನವಾಗಿ ಯೋಚಿಸೋಣ."

"ನನ್ನನ್ನ ಕ್ಷಮಿಸಿದೀಯ ಅಲ್ವಾ ಸುಹಾಸಿ.."

"ಇಲ್ಲ ನಾನು ನಿಮ್ಮನ್ನು ಅಷ್ಟು ಸುಲಭವಾಗಿ ಕ್ಷಮಿಸುವುದಿಲ್ಲ. ನನಗೂ ಅಭಿಮಾನ, ಸ್ವಾಭಿಮಾನ ಎಲ್ಲಾ ಇದೆ."

"ನನ್ಹತ್ರ ಏನು ಅದೆಲ್ಲಾ? ನಾನು ನಿನ್ನ ಗಂಡ ಕಣೇ.."

"ಹೌದು, ನಾನು ನಿಮ್ಮ ಹೆಂಡತಿ. ಆದರೆ ನಾನು ಹೇಗಿರಬೇಕು ಅಂತ ನನಗೂ ಗೊತ್ತು. ನೀವು ಹೊಲಕ್ಕೆ ಹೋಗಬೇಕು. ನಾನು ಬುತ್ತಿಯನ್ನು ಹೊತ್ತು ತರಬೇಕು ಹಿಟ್ಟು ಹುಳಿ ಮಾಡಿ ತರ್ತೀನಿ. ಇಬ್ಬರೂ ಮರದ ಕೆಳಗೆ ಕೂತು ಉಣ್ಣಬೇಕು.

"ಅಲ್ಲ... ಅಲ್ಲ.. ನಾನು ನಿನಗೆ ತಿನ್ನಿಸಬೇಕು. ನೀನು ನನಗೆ ತಿನ್ನಿಸಬೇಕು"

"ಆಮೇಲೆ?"

"ನಾನು ನಿನ್ನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಬೇಕು. ನೀನು ಸೆರಗಿನಲ್ಲಿ ನನ್ನ ಮುಖಕ್ಕೆ ಗಾಳಿ ಬೀಸಬೇಕು. ಹಾಡೊಂದನ್ನು ಹಾಡಬೇಕು."

"ನನಗೆ ಹಾಡೊಕ್ಕೆ ಬರೊಲ್ಲವಲ್ಲ."

"ಅಮ್ಮಂಗೆ ಬರುತ್ತೆ. ಕಲಿತ್ಕೋ... ಹಾಗೇ ಜೋಗುಳದ ಹಾಡನ್ನು ಕಲಿತ್ಕೋ. ಇನ್ನು ಒಂಭತ್ತು ತಿಂಗಳಿಗೆ ನೀನು ತಾಯಿಯಾಗುವುದು ಗ್ಯಾರಂಟಿ."

"ಥೂ... ಹೋಗೀಪ್ಪಾ...." ಅವನ ಕೈ ಮೇಲೆ ಹೊಡೆದಳು.

"ಆದಷ್ಟೂ ಬೇಗ ಇಬ್ಬರೂ ಮನೆಗೆ ಹೋಗೋಣ. ನಮ್ಮ ಮೊದಲ ರಾತ್ರಿ ನಮ್ಮನ್ನು ಕರೀತಿದೆ."

"ಅದಕ್ಕೆ ಇಷ್ಟು ನಾಟಕ ಆಡಬೇಕಾಗಿತ್ತಾ? ಅಲ್ಲಿ ನೋಡಿ, ಕಿಟಕಿಯಾಚೆಗಿನ ಚಂದ್ರ ನಮ್ಮಿಬ್ಬರನ್ನೇ ನೋಡ್ತಿದಾನೆ..." ಚಂದ್ರನ ಶೀತಲ ಕಿರಣ, ರೂಮಿನಲ್ಲಿ ಪಸರಿಸಿತ್ತು. ಇಬ್ಬರ ಹೃದಯವೂ ತಿಳಿಯಾಗಿತ್ತು. ಮಧುಚಂದ್ರನ ಬಗ್ಗೆ ಕನಸು ಕಾಣತೊಡಗಿದರು.

* *

# ಪ್ರೇಮದ ಹಾದಿಯಲ್ಲಿ...

**ಹೇ**ಮಾ ತನ್ನ ತಾಯಿಯೊಂದಿಗೆ, ಗಿರಿಜಮ್ಮನ ಮನೆಗೆ ಎರಡು ದಿನಗಳ ಮಟ್ಟಿಗೆ ಬಂದಿದ್ದಳು. ಗಿರಿಜಮ್ಮ, ಹೇಮಾಳ ತಾಯಿ ಸಾವಿತ್ರಿ ಇಬ್ಬರೂ ಆತ್ಮೀಯ ಸ್ನೇಹಿತೆಯರಾಗಿದ್ದರು. ಹೇಮಾಳಿಗೆ ಮಟ್ಟಸವಾದ ಶರೀರವಿತ್ತು. ಮೃದುವಾದ ಕೋಲು ಮುಖ ಅಗಲವಾದ ಅಂದವಾದ ಕಣ್ಣುಗಳು, ಅವಳ ಮುಖಕ್ಕೆ ಒಪ್ಪುವಂತಿದ್ದವು. ನೀಳವಾದ ಉದ್ದನೆಯ ತಲೆಗೂದಲು ಸೊಂಪಾಗಿ ಬೆಳೆದಿತ್ತು. ಆದರೆ ಏನು ದುರಾದೃಷ್ಟವೋ ಹೇನುಗಳ ಕಾಟ ಸದಾಕಾಲ ಇದ್ದೇ ಇತ್ತು. ತಲೆಗೂದಲನ್ನು ಆಗಾಗ್ಗೆ ತೊಳೆದುಕೊಳ್ಳುವುದು, ದಿನನಿತ್ಯ ಎರಡೆರಡು ಬಾಚಿದರೂ, ಹೇನಿನ ಸಂಖ್ಯೆ ಕಡಿಮೆ ಆಗಿರಲಿಲ್ಲ. ಮೆಡಿಕಲ್ ಷಾಪ್‌ಗಳಲ್ಲಿ ಸಿಗುವ ಔಷಧಿಗಳನ್ನು ತಲೆಗೂದಲಿಗೆ ಹಚ್ಚಲು ಹೆದರುತ್ತಿದ್ದಳು.

ಗಿರಿಜಮ್ಮನಿಗೆ ಹೇಮಾಳ ಪರಿಸ್ಥಿತಿ ಕಂಡು ಕನಿಕರ ಉಂಟಾಗಿತ್ತು. ಸೀಬೆ ಮರದ ಎಳೆಯ ಎಲೆಗಳನ್ನು ನೆನೆಸಿ ಮೆಂತ್ಯ, ಅರಿಶಿನದ ಪುಡಿಯನ್ನು ಒಂದು ಚಿಟಿಕೆ ಬೆರೆಸಿ, ನುಣ್ಣಗೆ ಅರೆದು ತಲೆಗೂದಲ ಬುಡಗಳಿಗೆ ಹಚ್ಚಿ, ಕಾಲುಗಂಟೆ ನೆನೆಯುವಂತೆ ತಿಳಿಸಿದಳು. ಹಂಡೆಯ ತುಂಬಾ ಬಿಸಿ ನೀರನ್ನು ಕಾಯಿಸಿ, ಶೀಕಾಕಾಯಿ ಸೋಪನ್ನು ತಂದು ಸಾವಿತ್ರಿಗೆ ಹೇಳಿದಳು,

"ನಿನ್ನ ಮಗಳಿಗೆ ತಲೆ ಸ್ನಾನ ಮಾಡಿಸು" ಸಾವಿತ್ರಿ ಬಚ್ಚಲು ಮನೆಗೆ ಬಂದು ಬಿಸಿ ನೀರನ್ನು ತೋಡಿ, ನೀರನ್ನು ಹದಗೊಳಿಸಿ, ಹೇಮಾಳನ್ನು ಕರೆದು ಮಣೆಯ ಮೇಲೆ ಕೂರಿಸಿ ನೀರು ಹಾಕಿ ತಲೆಗೂದಲನ್ನು ತೊಳೆದಳು. ಒಣಗಿದ ಟವೆಲ್ಲು, ಬಟ್ಟೆಗಳನ್ನು ತಂದು ಕೊಡ್ತೀನಿ. ಈ ಒದ್ದೆ ಬಟ್ಟೆಗಳನ್ನು ಬಿಚ್ಚಿ ಹಾಕಿ ಒಣಗಿದ ಬಟ್ಟೆಗಳನ್ನು ತೊಟ್ಟು ಹೊರಕ್ಕೆ ಬಾ" ಎನ್ನುತ್ತಾ ಹೊರಗೆ ಹೋದವಳು ಎಷ್ಟು ಹೊತ್ತಾದ್ರೂ ಬಂದಿರಲಿಲ್ಲ. ಕಾದು ಕಾದು ಸಾಕಾಗಿ ಹೇಮಾ ಅಮ್ಮಾ... ಅಮ್ಮಾ... ಎಂದು ಕರೆದಳು. ತಾಯಿ ಬರಲಿಲ್ಲ. ಮೆಲ್ಲಗೆ ಬಾಗಿಲನ್ನು ತೆರೆದು ಇಣಿಕಿ ನೋಡಿದಳು. ಹೊರಗೆ ಯಾರೂ ಇದ್ದಂತಿರಲಿಲ್ಲ. ಇದ್ದಕ್ಕಿದ್ದಂತೆ ಎಲ್ಲಾ ಎಲ್ಲಿ ಹೋದರೋ ಎಂದುಕೊಂಡು, ಒದ್ದೆ ಬಟ್ಟೆಯಲ್ಲೇ ಹೊರಬಂದಳು. ತನ್ನನ್ನು ಯಾರೂ ಗಮನಿಸುತ್ತಿಲ್ಲ ಎಂದುಕೊಂಡು, ಮೈಗೆ ಅಂಟಿಕೊಂಡಿದ್ದ ಪೆಟಿಕೋಟನ್ನು ಸರಿ ಮಾಡಿಕೊಳ್ಳುತ್ತಾ ರೂಮಿಗೆ ಬಂದಳು. ಅಲ್ಲಿಯೂ ತಾಯಿಯಿರಲಿಲ್ಲ. ಬಾಗಿಲ ಸಂದಿಯಲ್ಲಿ ನಿಂತು ಅಮ್ಮಾ... ಅಮ್ಮಾ... ಎಂದು ಮತ್ತೆ ಕರೆದಳು.

ಸರ್ರನೆ ಒಳ ಬಂದ ಸುರೇಶ, ಬಾಗಿಲ ಮರೆಯಲ್ಲಿ ನಿಂತಿದ್ದ ಹೇಮಾಳನ್ನು ವಿಸ್ಮಯದಿಂದ ನೋಡಿದ. ಬಿಚ್ಚಿಕೊಂಡಿದ್ದ ತಲೆಗೂದಲಿನಿಂದ ನೀರು ತೊಟ್ಟಿಕ್ಕುತ್ತಿತ್ತು. ಮೈಗೆ ಅಂಟಿಕೊಂಡಿದ್ದ ಪುಟ್ಟ ಪೆಟಿಕೋಟನಿಂದ ಅವಳ ಎದೆಯ ಭಾಗ ಉಬ್ಬಿರುವುದನ್ನು ಕಂಡ. ಒದ್ದೆಯಾಗಿದ್ದ ಮೊಣಕಾಲು, ತೊಡೆ ಎಲ್ಲವನ್ನು ಕಂಡ.

"ಅರೇ ಹೇಮಾ.. ಇದೇನಿದು ಅವತಾರ ಎಂದು ಬಿಟ್ಟ" ಹೇಮಾ ನಾಚಿಕೆಯಿಂದ ಮುದುರಿ ನಿಂತು ಕೈಗಳನ್ನು ಎದೆಯ ಭಾಗಕ್ಕೆ ಅಡ್ಡವಾಗಿ ಮುಚ್ಚಿಕೊಂಡಳು.

"ಸಾರೀ... ಆಂಟೀನ ಕರೀತೀನಿ" ಎಂದು ಹೊರಬಂದ. ಮತ್ತೊಮ್ಮೆ ಅವಳನ್ನು ನೋಡಬೇಕು ಎಂದೆನಿಸುತ್ತಿತ್ತು. ಅಲ್ಲೇ ಬಾಗಿಲ ಬಳಿ ನಿಂತ. ಅಷ್ಟರಲ್ಲಿ ಗಿರಿಜಮ್ಮ ಬಚ್ಚಲು ಮನೆಯ ಕಡೆಗೆ ಹೋದುದನ್ನು ಕಂಡ.

"ಆಂಟಿ ಹೇಮಾ ನಿಮ್ಮನ್ನು ಕರೀತಿದಾಳೆ... ಇಲ್ಲಿದಾಳೆ" ಎಂದು ರೂಮಿನ ಕಡೆ ಕೈ ತೋರಿ ಅಲ್ಲಿಂದ ಸರಿದಿದ್ದ. ಆದರೂ ತಾನು ಕಂಡ ಸೌಂದರ್ಯವನ್ನು ಮತ್ತೆ ಮತ್ತೆ ನೆನೆಸಿಕೊಂಡ. ಆಹಾ... ಹೇಮಾ ಎಷ್ಟು ಬೆಳೆದು ಬಿಟ್ಟಿದ್ದಾಳೆ ಎಂತಂದುಕೊಂಡ.

"ಯಾಕೆ ಒದ್ದೆ ಬಟ್ಟೇಲಿ ನಿಂತಿದೀಯಾ? ಚಳಿ ಆಗುಲ್ವಾ?"

"ಅಮ್ಮಾ... ನನ್ನ ಬಟ್ಟೆಗಳು..."

"ಅಯ್ಯೋ, ನನ್ನ ಮರೆವಿಗಿಷ್ಟು.. ಬಟ್ಟೆ ತರೋಕೆ ಅಂತ ಹೋದ್ನಾ? ಪಕ್ಕದ ಮನೆಯವಳು ಮಾತಾಡಿಸಿದಳು. ಮಾತಿಗೆ ನಿಂತೆ. ಮರತೇ ಬಿಟ್ಟೆ. ತಗೋ ಈ ಟವೆಲ್ಲಿನಿಂದ ತಲೆ, ಮೈ ಕೈ ಒರೆಸ್ಕೋ.." ಎನ್ನುತ್ತಾ ಮಂಚದ ಮೇಲಿದ್ದ ಟವೆಲ್ಲನ್ನು ಕೊಟ್ಟಳು.

"ಇದು ಯಾರದಮ್ಮ ಟವೆಲ್ಲು?"

"ಯಾರದ್ದೋ... ನೀನು ಒದ್ದೆ ಮೈ ಒರೆಸ್ಕೋ. ನಾನು ಒಣಗಿದ ಬಟ್ಟೆಗಳನ್ನು ತರ್ತೀನಿ. ನೀನು ಬಾಗಿಲು ಹಾಕ್ಕೋ. ನಾನು ಈಗ ಬಂದೆ" ಎನ್ನುತ್ತಾ ಸಾವಿತ್ರಿ ಮತ್ತೆ ಹೊರಗೆ ಹೋಗಿ ಬಟ್ಟೆಗಳನ್ನು ತಂದು ಕೊಟ್ಟಳು. ಹೇಮಾ ಬಟ್ಟೆ ಬದಲಾಯಿಸಿ, ಟವೆಲನ್ನು ತಲೆಗೆ ಸುತ್ತಿ ಹೊರಬಂದಳು.

* * * * *

ಅಮ್ಮಾ... ನನ್ನ ಟವೆಲ್ಲು ಎಲ್ಲಿ? ಇಲ್ಲೇ ಇತ್ತಲ್ಲ. ಸುರೇಶ ರೂಮಿನೊಳಗೆ ಬಂದು ಹುಡುಕಾಡುತ್ತಾ ಹೊರಬಂದ. ಕಿಟಕಿಯ ಬಳಿ ನಿಂತಿದ್ದ ಹೇಮಾಳನ್ನು ಕಂಡ. ಅವನ ಟವೆಲ್ಲನ್ನು ಅವಳು ತನ್ನ ತಲೆಗೆ ಸುತ್ತಿದ್ದನ್ನು ಕಂಡ. ಕೇಳಬೇಕೆಂದುಕೊಂಡು ಎರಡು ಹೆಜ್ಜೆ ಇಟ್ಟವನು ಹಾಗೇ ನಿಂತ. ಈಗ ಮೈ ತುಂಬಾ ಮುಚ್ಚುವ ನೈಟಿಯನ್ನು ಧರಿಸಿದ್ದಳು. ತಾನು ಕಂಡಿದ್ದ ಅಂದವನ್ನು ನೆನೆಸಿಕೊಂಡು ಮುಗುಳ್ನಕ್ಕ. ಹೇಮಾ ತಿರುಗಿ ನೋಡಿ ಸುರೇಶನನ್ನು ಕಂಡು ನಾಚಿ, ಅಲ್ಲಿಂದ ಓಡಿದ್ದಳು.

ಹದಿಮೂರು ವರ್ಷಗಳ ಹೇಮಾ ಯೌವನಕ್ಕೆ ಕಾಲಿಡುತ್ತಿದ್ದಳು. ಅಂಗಾಂಗಗಳಲ್ಲಿ ಪ್ರಕೃತಿ ಸಹಜವಾದ ಸೌಂದರ್ಯಗಳು ತುಂಬಿಕೊಳ್ಳುತ್ತಿದ್ದವು. ಲಜ್ಜೆಯ ಕೆಂಪು ಕದಪುಗಳಲ್ಲಿ

ಹರಡಿತ್ತು. ಸುರೇಶ ಅವಳು ಹೋದ ದಿಕ್ಕನ್ನೇ ನೋಡುತ್ತಾ ನಿಂತ. ಅವನ ಹಿಂದೆ ಬಂದು ನಿಂತಿದ್ದ ಭಾರ್ಗವ ಎಂದ.

"ಹೇಮಾ ಎಷ್ಟು ಬದಲಾಗಿ ಬಿಟ್ಟಿದ್ದಾಳೆ ಅಲ್ವಾ?" ನಗುತ್ತಾ ಕೇಳಿದ.

"ನೀನ್ಯಾಕೋ ಇಲ್ಲಿಗೆ ಬಂದೆ?" ಎಂದು ರೇಗುತ್ತಾ ಸುರೇಶ ಅಲ್ಲಿಂದ ಕದಲಿದ್ದ. ಎರಡು ಮೂರು ದಿನಗಳ ನಂತರ ಸಾವಿತ್ರಿ ತನ್ನ ಮಗಳೊಂದಿಗೆ ಹೊರಟು ಹೋದಳು. ಸುರೇಶ ದೂರದಿಂದ ಆಗಾಗ್ಗೆ ಹೇಮಳ ಕಡೆ ನೋಡಿ ಅವಳ ಮೈಯ ಸಿರಿಯನ್ನು ತನ್ನ ಕಣ್ಣುಗಳೊಳಗೆ ತುಂಬಿಕೊಳ್ಳುತ್ತಿದ್ದ. ಭಾರ್ಗವ ಅದನ್ನು ಗಮನಿಸಿ ತಮ್ಮನ ಬೆನ್ನ ಮೇಲೆ ಗುದ್ದಿದ್ದ. "ಕದ್ದು ಮುಚ್ಚಿ ಅವಳನ್ಯಾಕೆ ನೋಡ್ತೀಯಾ?.. ಚಿಕ್ಕ ವಯಸ್ನಲ್ಲಿ ಅವಳು ಹೇಗಿದ್ಲು ಅಂತ ನೆನೆಸ್ಕೋ"

"ನೀನ್ಯಾಕೆ ನನ್ನನ್ನ ಸ್ಪೈ ಮಾಡ್ತೀಯಾ?" ಅವನು ಗದರಿದ.

"ಹುಚ್ಚು ಹುಡುಗ ನೀನು ಇನ್ನು ಎಳಸು" ಎಂದು ನಕ್ಕಿದ್ದ.

ವರುಷಗಳು ಉರುಳಿದವು. ಹೇಮಾ ಕಾಲೇಜಿಗೆ ಸೇರಿಕೊಂಡಿದ್ದಳು. ಅದೇ ಕಾಲೇಜಿಗೆ ಸುರೇಶ ಲೆಕ್ಚರರ್ ಆಗಿ ಸೇರಿಕೊಂಡ. ಮೊದಲ ದಿನ, ಮೊದಲನೇ ವರ್ಷದ ತರಗತಿಗೆ ಪಾಠ ಮಾಡಲು ಬಂದಾಗ. ಮುಂದಿನ ಬೆಂಚಿನಲ್ಲಿ ಕುಳಿತಿದ್ದ ಹೇಮಾಳನ್ನು ಗುರುತು ಹಿಡಿದ. ಸಂತಸದಿಂದ ಅವನ ಕಣ್ಣುಗಳು ಮಿಂಚಿದವು. ಅವಳು ನಾಚಿಕೆಯಿಂದ ತಲೆ ತಗ್ಗಿಸಿದಳು. ಅವಳು ಅವನನ್ನು ಗುರುತಿಸಿರಲಿಲ್ಲ. ತರಗತಿ ಮುಗಿದ ನಂತರ ಅವನು ಸ್ಟಾಫ್‌ರೂಂಗೆ ಬಂದರೂ, ಹೇಮಾಳನ್ನು ಕುರಿತು ಚಿಂತಿಸುತ್ತಿದ್ದ. ಅವಳೂ ಇದೇ ಕಾಲೇಜಿನಲ್ಲಿ ಓದುತ್ತಿದ್ದಾಳೆ ಎಂದು ಮುದಗೊಂಡಿದ್ದ.

* * * * *

ಸುರೇಶನ ಅಣ್ಣ ಭಾರ್ಗವನಿಗೆ ಮದುವೆ ಗೊತ್ತಾಗಿತ್ತು. ಗಿರಿಜಮ್ಮ ಮಕ್ಕಳೊಡನೆ ಹೇಳಿದಳು. "ನನಗೆ ಸಾವಿತ್ರಿಯ ನೆನಪು ಒತ್ತಿಕೊಂಡು ಬರ್ತಿದೆ. ಈಗ ಅವಳು ಬದುಕಿದ್ದಿದ್ರೆ ನನಗೆ ಸಹಾಯ ಮಾಡುವುದಕ್ಕೆ ಖಂಡಿತಾ ಬಂದಿರುತ್ತಿದ್ದಳು. ಅವಳ ಮಗಳು ಹೇಮಾ ಎಲ್ಲಿದ್ದಾಳೋ... ಎಷ್ಟೋ ವರ್ಷಗಳಾಯಿತು ಅವರುಗಳ ಸುದ್ದಿ ತಿಳಿದು" ನಿಟ್ಟುಸಿರು ಬಿಟ್ಟಳು.

"ಹೇಮಾ ನನ್ನ ಸ್ಟೂಡೆಂಟ್ ಆಗಿದಾಳಮ್ಮ. ಇಲ್ಲೇ, ಇದೇ ಕಾಲೇಜಿನಲ್ಲಿ ಓದುತ್ತಿದಾಳೆ" ಸುರೇಶನೆಂದ.

"ಹೌದೇನೋ.. ಈಗ ಹೇಳ್ತಿದೀಯಲ್ಲ... ಹೇಮಂಗೆ, ಮನೆಗೆ ಬರೋಕೆ ಹೇಳಬೇಕಾಗಿತ್ತು.

"ನಾನು ಇದುವರೆಗೂ ಮಾತನ್ನಾಡಿಸಿಲ್ಲಮ್ಮ"

"ಇವನದ್ದೆಲ್ಲಾ ಸೈಲೆಂಟ್ ಲವ್" ಭಾರ್ಗವ ಗೊಣಗಿದ. ಸುರೇಶ ನಕ್ಕ.

"ನಾಳೇನೇ ಮಾತನಾಡಿಸಿ, ಭಾರ್ಗವಂಗೆ ಮದುವೆ ಅಂತ ಹೇಳು. ನಾನು ಕರೆದೆ ಅಂತ ಹೇಳು" ಸುರೇಶ ಆಗಲಿ ಎಂದು ತಲೆಯಾಡಿಸಿ ನುಡಿದ.

ಮಾರನೇ ದಿನ ತನ್ನ ಕ್ಲಾಸಿಗೆ ಹೊರಡುವ ಮೊದಲು. ಅಟೆಂಡರ್ ಕೈಲಿ ಹೇಮಾಳಿಗೆ ಹೇಳಿ ಸ್ಟಾಫ್ ರೂಮಿಗೆ ಕರೆಸಿಕೊಂಡ. ಅವಳು ಸಂಕೋಚದಿಂದ ಒಳ ಬಂದಿದ್ದಳು.

"ನೀನು ಹೇಮಾ ಅಲ್ವಾ?" ಏಕವಚನದಲ್ಲಿ ಕೇಳಿದ್ದ. ಹೌದು ಎಂಬಂತೆ ಗೋಣು ಆಡಿಸಿದ್ದಳು. ನಾನು ಯಾರೂಂತ ಗೊತ್ತಾಗ್ಲಿಲ್ವಾ? ಸುರೇಶ... ಗಿರಿಜಮ್ಮನ ಮಗ.." ಅವಳು ಆಶ್ಚರ್ಯದಿಂದ ಕಣ್ಣರಳಿಸಿದಳು. ನಾಚಿಕೆಯಿಂದ ಕೆನ್ನೆಗಳು ಕೆಂಪಾಗಿದ್ದವು. ಗಲ್ಲ ಅದುರಿತ್ತು.

"ನೀನು ಆಗ ಹೇಗಿದ್ದ್ಯೋ ಈಗಲೂ ಹಾಗೇ ಇದೀಯ. ಅದಕ್ಕೇ ನಿನ್ನನ್ನು ಗುರುತಿಸೋದು ಕಷ್ಟವಾಗಲಿಲ್ಲ. ಇಲ್ಲಿ ಇಲ್ಲಿದೀರಿ? ಅಮ್ಮ ನಿಮ್ಮನ್ನೆಲ್ಲಾ ತುಂಬಾ ನೆನೆಪಿಸಿಕೊಳ್ತಾಳೆ. ಪಾಪ... ನಿಮ್ಮ ತಾಯಿ... ಬದುಕಿದ್ದಿದ್ದರೆ ಖಂಡಿತಾ ನಮ್ಮ ಮನೆಗೆ ನಿನ್ನನ್ನು ಕರೆದುಕೊಂಡು ಬರುತ್ತಿದ್ದರು. "ಹೇಮಾ ತಲೆತಗ್ಗಿಸಿದಳು. "ಸಾರಿ ನಿನ್ನ ಮನಸ್ಸಿಗೆ ನೋವನ್ನುಂಟು ಮಾಡಿದೆ. ಮುಂದಿನ ತಿಂಗಳು ಭಾರ್ಗವಂಗೆ ಮದುವೆ ಅಮ್ಮ ನಿನ್ನನ್ನ ನೋಡಬೇಕಂತೆ ಕರ್‍ಕೊಂಡು ಹೋಗ್ತೀನಿ ಬರ್ತೀಯಾ?.."

ಅವಳು ಹೂಂ... ಉಹುಂ ಯಾವುದನ್ನು ಹೇಳದೇ, "ನಾನು ಬರ್ತೀನಿ ಹೊತ್ತಾಯ್ತು ಅಂತ ಹೇಳಿ ಹೊರಟು ಹೋಗಿದ್ದಳು. ಅವನಿಗೆ ನಿರಾಸೆಯಾಗಿತ್ತು. ಅವಳ ಹತ್ತಿರ ಇನ್ನು ಮಾತನ್ನಾಡಬೇಕೆನ್ನಿಸಿತ್ತು, ಅವಳು ಯಾವ ಮಾತನ್ನು ಆಡಿರಲಿಲ್ಲ. ಮತ್ತೆ ಯಾಕೋ ಏನೋ ಕೆಲವಾರು ದಿನಗಳು ಕಾಲೇಜಿಗೇ ಬಂದಿರಲಿಲ್ಲ.

ಮದುವೆಗೆ ಒಂದು ವಾರವಿದೆ ಎನ್ನುವಾಗ ಸುರೇಶ ರಜ ಹಾಕಿದ್ದ. ಹೇಮಾಳ ಹೆಸರನ್ನು, ತರಗತಿಯನ್ನು ಬರೆದು ಆಹ್ವಾನ ಪತ್ರಿಕೆಯನ್ನು ಅಟೆಂಡರ್ ಕೈಯಲ್ಲಿ ಕೊಟ್ಟು ಹೇಮಾಳಿಗೆ ತಲುಪಿಸುವಂತೆ ಹೇಳಿದ್ದ. ಅವಳಿಗೆ ಆಹ್ವಾನ ಪತ್ರಿಕೆ ಸೇರಿತೋ ಇಲ್ಲವೋ ತಿಳಿಯಲಿಲ್ಲ. ಅವಳು ಮದುವೆಗೆ ಬಂದಿರಲಿಲ್ಲ. ಸುರೇಶ ಅವಳ ಬರುವನ್ನು ನಿರೀಕ್ಷಿಸಿದ್ದ, ನಿರಾಸೆಯಾಗಿತ್ತು.

ಭಾರ್ಗವನ ಹೆಂಡತಿ ಸುಶೀಲಾ ಸುರೇಶನಿಗೆ ಅತ್ತಿಗೆಯಾದರೂ, ಸಲುಗೆ ಇರಲಿಲ್ಲ. ಮೊದ ಮೊದಲು ಅವಳೊಡನೆ ಮಾತನಾಡಲು ಸಂಕೋಚವೆನಿಸುತ್ತಿತ್ತು. ಆದರೆ ಸುಶೀಲಾ ಸ್ನೇಹಮಯಿ. ಸುರೇಶನ ಸ್ನೇಹವನ್ನು ಅಪೇಕ್ಷಿಸಿದ್ದಳು. ಹೆಚ್ಚು ಕಡಿಮೆ ತನ್ನ ವಯಸ್ಸಿನವನು. ಅವನೊಡನೆ ಮಾತುಕತೆ, ಹರಟೆಗಳು ಬೇಕೆನಿಸುತ್ತಿತ್ತು. ಅವನನ್ನು ಮಾತಿಗೆಳೆಯಲು ಪ್ರಯತ್ನಿಸುತ್ತಿದ್ದಳು. ಆದರೆ ಅವನು ಒಂಟಿಯಾಗಿರಲು ಬಯಸುತ್ತಿದ್ದ. ಅವನನ್ನು ಯಾವುದೋ ಚಿಂತೆ ಕಾಡುತ್ತಿದೆ ಎಂದು ಭಾವಿಸಿ, ಅದನ್ನು ತಿಳಿದುಕೊಳ್ಳಬೇಕೆಂದು ಕೊಂಡಳು. ಮೊದಲು ಅವನ ಸ್ನೇಹವನ್ನು ಗಳಿಸಬೇಕೆಂದುಕೊಂಡು. ಅವನು ಇದ್ದಲ್ಲಿಗೇ ಕಾಫಿ ತಿಂಡಿಯನ್ನು ತೆಗೆದುಕೊಂಡು ಹೋಗಿ ಕೊಡುತ್ತಿದ್ದಳು. ಗಿರಿಜಮ್ಮನಿಂದ ಹೊಸ ಹೊಸ ತಿಂಡಿಯನ್ನು ಕಲಿತು ಮಾಡಿ ಕೊಡುತ್ತಿದ್ದಳು.

ಒಮ್ಮೆ ಸುರೇಶನಿಗೆ ಮೈಸೂರು ಪಾಕು ಇಷ್ಟವೆಂದು ತಿಳಿದು ಅದನ್ನು ಮಾಡಿ, ಅವನಿಗೆ ತಿನ್ನಲು ಕೊಟ್ಟಳು. ಸುರೇಶ ಮುಜುಗರದಿಂದ ತಟ್ಟೆಯನ್ನೆತ್ತಿಕೊಂಡ.

ತಿಂದು ನೋಡಿ. ಹೇಗಿದೆ ಅಂತ ಹೇಳ್ತೀರಾ ಸುರೇಶ್... ನಾನೇ ಮಾಡಿದೆ" ಅವಳು ಹೆಮ್ಮೆಯಿಂದ ಹೇಳಿದಾಗ. ಅವನು ಕಿರುನಗೆ ನಕ್ಕು, ಒಂದು ಚೂರನ್ನು ಬಾಯಿಗೆ ಹಾಕ್ಕೊಂಡ. ಅವಳ ಕೈ ಚಳಕ ಚೆನ್ನಾಗಿತ್ತು. ಮೈಸೂರು ಪಾಕು ರುಚಿಯಾಗಿತ್ತು.

"ಅತ್ತಿಗೆ, ಮೈಸೂರು ಪಾಕು ಅದ್ಭುತವಾಗಿದೆ" ಎಂದ. ಅವಳ ಮುಖದಲ್ಲಿ ಮಂದಹಾಸ ಮಿನುಗಿತು. ಮನಸ್ಸು ಅರಳಿತ್ತು. "ಥ್ಯಾಂಕ್ಸ್" ಎಂದಳು. ಅಂದಿನಿಂದ ಅವನು ಕಾಲೇಜಿನಿಂದ ಬರುವ ವೇಳೆಗೆ, ಅವನಿಗಿಷ್ಟವಾದ ಸಿಹಿ ತಿಂಡಿಗಳನ್ನು ತಯಾರಿಸಿಟ್ಟಿರುತ್ತಿದ್ದಳು. ಹಬ್ಬದ ದಿನಗಳಲ್ಲಿ ಪಾಯಸ, ಒಬ್ಬಟ್ಟು, ಜಾಮೂನು ಮುಂತಾದ ತಿಂಡಿಗಳನ್ನು, ಬಿಸಿಬೇಳೆಬಾತ್, ವಾಂಗೀಬಾತ್ ಇತ್ಯಾದಿಗಳನ್ನು ರುಚಿಯಾಗಿ ತಯಾರಿಸುತ್ತಿದ್ದಳು. ಆಗ ಈಗ, ಚಕ್ಕುಲಿ, ಕೋಡುಬಳೆ ಮುಂತಾದ ಕರಿದ ತಿಂಡಿಗಳನ್ನು ಗರಿಗರಿಯಾಗಿ ಮಾಡಿ, ಅವನಿಗೆ ತಿನ್ನಲು ಕೊಡುತ್ತಿದ್ದಳು. ಈ ತಿಂಡಿ ತೀರ್ಥಗಳ ಮಧ್ಯಸ್ಥಿಕೆಯಿಂದ ಅವನ ಸಂಕೋಚ ದೂರವಾಗಿತ್ತು. ಸಲುಗೆ ಬೆಳೆದಿತ್ತು.

"ನನ್ನ ಸ್ಟೂಡೆಂಟ್ ಹೇಮಾ ಅಂತ ಒಬ್ಬಳಿದ್ದಾಳೆ. ಅವಳು ಮೊದಲಿನಿಂದಲೂ ನಮಗೆ ಪರಿಚಿತಳೇ... ಅವಳೊಂದಿಗೆ ಏನೇನೋ ತುಂಬಾ ಮಾತನಾಡಬೇಕು ಅಂತ ಅನ್ನಿಸುತ್ತೆ. ಆದರೆ ಅವಳನ್ನು ಕಂಡೊಡನೆ ಮಾತನಾಡಬೇಕು ಅಂತ ಅಂದುಕೊಂಡಿದ್ದೆಲ್ಲ ಗಂಟಲೊಳಗೇ ಉಳಿದು ಬಿಡುತ್ತೆ. ಏನು ಮಾಡಲಿ?" ಅತ್ತಿಗೆಯೊಡನೆ ಹೇಳಿದ.

ಅವಳು ಮೆಲುನಗೆ ನಕ್ಕಳು. "ನೀನು ಅವಳನ್ನು ಮೆಚ್ಚಿದೀಯ ಅಲ್ವಾ?"

"ಏನೋ ನಂಗೊತ್ತಿಲ್ಲ"

"ಏನೋ ಇದೆ ಅಂತ ನಿನ್ನ ಮುಖವೇ ಹೇಳ್ತಿದೆ. ನೋಡೋಕೆ ಹೇಗಿದಾಳೆ? ತುಂಬಾ ಚೆನ್ನಾಗಿದಾಳಾ?"

"ಹುಂ... ಪರವಾಗಿಲ್ಲ. ಕೋಲು ಮುಖ, ದೊಡ್ಡ ದೊಡ್ಡ ಕಣ್ಣುಗಳು, ಉದ್ದನೆಯ ಕಪ್ಪು ಜಡೆ, ಚಿಕ್ಕ ವಯಸ್ಸಿನಲ್ಲಿ ತುಂಬಾ ಕೊಳಕಾಗಿದ್ದಳು. ತಲೆ ತುಂಬಾ ಹೇನು ಇತ್ತಂತೆ ಅಮ್ಮ ಹೇಳ್ತಿದ್ಲು..."

"ಅಷ್ಟಿದ್ದರೂ ನೀನು ಅವಳನ್ನು ಮೆಚ್ಚೋಕೆ ಕಾರಣ?..." ಸುರೇಶನ ಮುಖ ಕೆಂಪಾಗಿತ್ತು. ಆ ದಿನ ಒದ್ದೆ ಬಟ್ಟೆಯಲ್ಲಿ ಕಂಡ ಹೇಮಾಳ ಬಗ್ಗೆ ಹೇಳುವುದು ಹೇಗೆ? ಅವನು ತಬ್ಬಿಬ್ಬಾದ.

"ಹೋಗಲಿ ಬಿಡು. ಇನ್ನೇನೋ ಕಾರಣವಿರಬಹುದು. ನಾನು ಬಂದು ಅವಳ ಹತ್ರ ಮಾತಾಡ್ಲಿ ಅಂತ ನಿನ್ನ ಆಸೇನಾ?"

"ಹೌದು ಅತ್ತಿಗೆ... ನೀವು ಮಾತಾಡಿ, ನನ್ನ ಹತ್ರ ಮಾತಾಡಬೇಕಂತೆ ಅಂತ ಹೇಳಿ.."

"ಯಾಕೋ ಮೀಸೆ ಹೊತ್ತ ಹುಡುಗನೇ... ಅವಳು ಹುಡುಗಿ... ನಿನಗಿಂತ ಹೆಚ್ಚು ನಾಚಿಕೆ ಅವಳಿಗಿರುತ್ತೆ... ನಿನಗ್ಯಾಕೆ ಹಿಂಜರಿಕೆ..."

"ಅವಳು ನನ್ನ ಸ್ಟೂಡೆಂಟ್. ನಾನು ಅವಳ ಲೆಕ್ಚರರ್. ಅಪಾರ್ಥ ಕಲ್ಪಿಸ್ತಾರೆ. ಅಪವಾದ ಹುಟ್ಟಿಸ್ತಾರೆ."

"ಸರಿ... ನಾನು ನಿಮ್ಮಿಬ್ಬರ ಮಧ್ಯಸ್ಥಿಕೆ ವಹಿಸಬೇಕು ಅಷ್ಟೇ ತಾನೆ. ನಾನೇ ಕಾಲೇಜಿಗೆ ಬಂದು ಅವಳ ಹತ್ರ ಮಾತಾಡ್ತೀನಿ."

"ಥ್ಯಾಂಕ್ಸ್ ಅತ್ತಿಗೆ... ನನ್ನ ಮನಸ್ಸು ಹಗುರವಾಯಿತು. ಈಗಲೇ ಈ ವಿಷಯವನ್ನು ಅಣ್ಣಂಗಾಗಲೀ, ಅಮ್ಮಂಗಾಗಲೀ ಹೇಳಬೇಡಿ, ಪ್ಲೀಸ್.."

"ಹೂಂ... ಕಣಪ್ಪಾ, ಹೇಳೊಲ್ಲ" ಅವನ ಕೈಯನ್ನು ಒತ್ತಿ ವಿಶ್ವಾಸ ತೋರಿದಳು.

* * * * *

ಒಂದೆರಡು ದಿನಗಳ ಬಳಿಕ ಸುಶೀಲಾ ಕಾಲೇಜಿಗೆ ಬಂದಳು. ಪ್ರಿನ್ಸಿಪಾಲರ ರೂಮಿಗೆ ಬಂದು ತಾನು ಹೇಮಾಳನ್ನು ಅರ್ಜೆಂಟಾಗಿ ಕಂಡು ಮಾತನಾಡಬೇಕಾಗಿದೆ ಎಂದು ರಿಕ್ವೆಸ್ಟ್ ಮಾಡಿಕೊಂಡಳು. ಅವರು ಮೊದಲಿಗೆ ಅನುಮಾನಿಸಿದರೂ, ಒಪ್ಪಿ ಅವಳಿಗೆ ಕಾಯುವಂತೆ ಹೇಳಿದರು. ಕಾಲೇಜಿನ ಆವರಣದಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕುಳಿತು ಕಾಯತೊಡಗಿದಳು.

ಹೇಮಾ ತನ್ನ ಗೆಳತಿ ಸುಮಾಳೊಂದಿಗೆ ಮಾತನಾಡುತ್ತಾ ಅಲ್ಲಿಗೆ ಬಂದಳು. ಸುಶೀಲಾ ಇತ್ತ ತಿರುಗಿದಳು. ಸುಶೀಲಾ ಅವಳನ್ನುದ್ದೇಶಿಸಿ ಕೇಳಿದಳು.

"ನೀನು ಹೇಮಾ ಅಲ್ವಾ?.. ನಾನು ಸುಶೀಲ ಅಂತ.. ಗಿರಿಜಮ್ಮನ ಸೊಸೆ" ತನ್ನ ಪರಿಚಯವನ್ನು ಹೇಳಿಕೊಂಡಳು. ಸುಮಾ ಮುಂದಕ್ಕೆ ಹೊರಟು ಹೋದ ನಂತರ ಕೇಳಿದಳು.

"ಯಾಕೆ ಹೇಮಾ... ಸುರೇಶನ ಮೇಲೆ ನಿನಗೆ ಏನಾದ್ರೂ ಅಸಮಾಧಾನನಾ? ನಮ್ಮ ಮದುವೆಗೂ ಬರಲಿಲ್ಲ. ಅವನ ಬಳಿ ಏನನ್ನು ಹೇಳಿಲ್ಲವಂತೆ.."

"ಬರೋಕೆ ಆಗಲಿಲ್ಲ"

"ಅದನ್ನಾದ್ರೂ ಹೇಳಬಹುದಾಗಿತ್ತು. ಅವನು ತುಂಬಾ ಒಳ್ಳೆಯ ಹುಡುಗ. ಸ್ವಲ್ಪ ಮೆದು. ಅವನು ಮಾತನಾಡಿಸಿದರೆ ನೀನೂ ಮಾತನಾಡು. ಅವನಿಗೆ ಖಂಡಿತಾ ಖುಷಿಯಾಗುತ್ತೆ" ಹೇಮಾ ಕಸಿವಿಸಿಗೊಂಡಳು. ಇವಳ್ಯಾಕೆ ಮಧ್ಯಸ್ಥಿಕೆ ವಹಿಸೋಕ್ಕೆ ಬಂದಿದಾಳೆ. ಸುರೇಶ ಯಾಕೆ ಅತ್ತಿಗೆಯನ್ನು ನನ್ನ ಬಳಿಗೆ ಕಳಿಸಿದಾನೆ? ಅವನ ಮನಸ್ನಲ್ಲಿ ಏನಿದೆ?

ಅವಳು ಮೌನವಾಗಿದ್ದುದನ್ನು ಕಂಡು, ಸುಶೀಲ ಹೆಚ್ಚು ಮಾತಾಡದೇ ಅಲ್ಲಿಂದ ಹೊರಟು ಬಿಟ್ಟಳು. ತಲೆ ಬುಡ ಒಂದೂ ಅರ್ಥವಾಗದ ಹೇಮಾ ಹಾಗೇ ನಿಂತಿದ್ದಳು. ಸುಮಾ ಬಂದು ಎಚ್ಚರಿಸಿದಳು.

* * * * *

ಕಲ್ಲು ಬೆಂಚಿನ ಮೇಲೆ ಸುಮಾಳೊಡನೆ ಮಾತನಾಡುತ್ತಾ ಕುಳಿತಿದ್ದ ಹೇಮಾ ಸುರೇಶ ಬರುತ್ತಿರುವುದನ್ನು ಕಂಡು ಎದ್ದು ನಿಂತು, ಸುಮಾಳಿಗೂ ಹೇಳಿದಳು. ಇಬ್ಬರೂ ಒಟ್ಟಿಗೇ "ನಮಸ್ಕಾರ ಸಾರ್" ಎಂದರು. ಸುರೇಶ ನಕ್ಕ.

"ನಮಸ್ಕಾರ..." ಎಂದವನು, "ಹೇಗಿದೀಯಾ ಹೇಮಾ?" ಎಂದು ಅವಳನ್ನು ಕುರಿತು ಕೇಳಿದ. ಅವಳು ಕಸಿವಿಸಿಗೊಂಡಳು. "ಊಟ ಆಯಿತಾ?" ಮತ್ತೆ ಕೇಳಿದ.

"ಹೂಂ, ಆಯಿತು" ಇಬ್ಬರೂ ಒಟ್ಟಿಗೇ ನುಡಿದರು. ಸುರೇಶ ನಕ್ಕ.

"ನೆನ್ನೆ ನಿಮ್ಮ ಅತ್ತಿಗೆ ಬಂದಿದ್ದರು. ನಿಮ್ಮ ಬಗ್ಗೆ ಹೇಳಿದರು" ಎಂದಳು.

"ಓ.. ಏನಂತ ಹೇಳಿದರು?"

"ನಾನು ನಿಮ್ಮ ಹತ್ತಿರ ಮಾತನಾಡೋಲ್ಲ ಅಂತ ಹೇಳಿದಿರಂತೆ. ಯಾಕೆ?" ಈಗ ಸುರೇಶ ತಬ್ಬಿಬ್ಬುಗೊಂಡ. ಅವಳ ನೇರವಾದ ನುಡಿಗೆ ಕಸಿವಿಸಿಗೊಂಡ.

"ನೀನು ಮಾತನಾಡಿಸಿದರೆ, ನಾನೂ ಆಡಬಹುದು... ಆದರೆ..."

"ಏನು ಮಾತು ಇರುತ್ತೆ? ನೀವು ಪಾಠ ಹೇಳಿ ಕೊಡುವ ಲೆಕ್ಚರರ್. ನಿಮ್ಮನ್ನು ಏನು ವಿಷಯ ಕೇಳುವುದು?"

"ಅದೂ ಸರಿಯೇ..."

"ನಾನಿನ್ನು ಬರ್ಲಾ ಸಾರ್, ಹೊತ್ತಾಗುತ್ತೆ. ಮನೇಲಿ ಕಾಯ್ತಾ ಇರ್ತಾರೆ. ಹೊತ್ತಾದರೆ ಆತಂಕ ಪಟ್ಕೋತಾರೆ"

"ಹುಂ.. ನೀನು ಹೊರಡು" ಅವರಿಬ್ಬರನ್ನು ಕಳಿಸಿ, ತಾನೂ ಮುಂದಕ್ಕೆ ನಡೆದ.

"ಅತ್ತಿಗೆ ತಿಂಡಿಗೆ ಏನು ಮಾಡಿದೀರಿ?" ಅಡಿಗೆ ಮನೆಯ ಬಾಗಿಲಲ್ಲಿ ನಿಂತು ಕೇಳಿದ. ನಿತ್ಯಕ್ಕಿಂತ ಹೆಚ್ಚು ಉತ್ಸಾಹದಲ್ಲಿರುವಂತೆ ಕಂಡಿತು. ಅವನನ್ನೆ ದಿಟ್ಟಿಸಿದಳು.

"ರವೆ ಭಾತ್ ಇಟ್ಟಿದೀನಿ. ಹೇಮಾ ಮಾತಾಡಿಸ್ತಿದಾಳಾ"

"ನಿಮ್ಮ ಪ್ರಭಾವ ಚೆನ್ನಾಗಿ ಬೀರಿದೆ.." ಧೈರ್ಯವಾಗಿ ಮಾತಾಡಿದಳು.

"ಅವಳು ಧೈರ್ಯವಂತೆಯಂತೆಯೇ ಕಂಡಳು. ನೀನೇ ಸ್ವಲ್ಪ ಹಿಂಜರಿಯುವವನು. ತಿಂಡಿ ಸ್ವಲ್ಪ ಹೆಚ್ಚಾಗಿಯೇ ಇದೆ. ಅವಳಿಗೂ ಕೊಡುವುದಾದರೆ ಕೊಡು."

"ನಾನು ಸ್ಟಾಫ್‌ನಲ್ಲಿರ್ತೀನಿ. ಅಲ್ಲಿಗೆ ಅವಳನ್ನು ಕರೆಯೋಕೆ ಆಗೊಲ್ಲ. ಪಾರ್ಕಿನಲ್ಲಿ ವಿದ್ಯಾರ್ಥಿಯಂತೆ ಅವಳ ಜೊತೆ ಕೂತು ತಿನ್ನೋಕೆ ಆಗೊಲ್ಲ"

"ಇದೊಳ್ಳೇ ಪ್ರಾಬ್ಲಂ ಆಯ್ತು... ಒಂದು ಚಿಕ್ಕ ಡಬ್ಬಿಗೆ ಹಾಕಿ ಕೊಡ್ತೀನಿ.ಅದನ್ನು ಅವಳಿಗೆ ಕೊಟ್ಟು ಬಿಡು" ಮತ್ತೊಂದು ಚಿಕ್ಕ ಡಬ್ಬಿಗೆ ರವೆ ಭಾತ್‌ನ್ನು ತುಂಬಿಸಿ ಕೊಟ್ಟಳು.

"ಥ್ಯಾಂಕ್ ಯೂ ಅತ್ತಿಗೆ" ಎಂದ ನಗುತ್ತಾ.

ಬಿಡುವಿನ ಸಮಯದಲ್ಲಿ ಹೇಮಾಳನ್ನು ಕರೆಸಿ, ಅವಳ ಕೈಗೆ ಡಬ್ಬಿಯನ್ನು ಇತ್ತ. "ಅತ್ತಿಗೆ ನಿನಗಾಗಿ ಕಳಿಸಿದ್ದಾರೆ" ಎಂದ. ಅವಳು ನಾಚಿದಳು. "ನಿನ್ನ ಊಟ ಆಯ್ತಾ?" ಕೇಳಿದ.

"ಇಲ್ಲ, ನಾನು ಮನೆಗೆ ಹೋಗಿ ಊಟ ಮಾಡ್ತೀನಿ"

"ಅಷ್ಟು ಹೊತ್ತು ಹೊಟ್ಟೆ ಹಸಿದುಕೊಂಡಿರ್ತೀಯಾ? ಆರೋಗ್ಯಕ್ಕೆ ಒಳ್ಳೇದಲ್ಲ"

"ನಾನು ಲಂಚ್ ಬಾಕ್ಸ್ ತರೋದಿಲ್ಲ. ಇವತ್ತು ಬೇಗ ಹೊರಟಿದ್ದೆ" ಎನ್ನುತ್ತಾ ಅವನಿತ್ತ ಡಬ್ಬಿಯನ್ನು ಎತ್ತಿಕೊಂಡು ವೈಯಿಟಿಂಗ್ ರೂಂಗೆ ಬಂದಳು. ಡಬ್ಬಿಯ ಮುಚ್ಚಳವನ್ನು ತೆಗೆದು, ಘಂ ಎನ್ನುತ್ತಿದ್ದ ರವೆ ಭಾತ್‌ನ್ನು ಸುಮಾಳಿಗೂ ಕೊಟ್ಟು ತಾನೂ ತಿಂದಳು. ಖಾಲಿ ಡಬ್ಬಿಯನ್ನು ಚೆನ್ನಾಗಿ ತೊಳೆದು ಅವನಿಗೆ ವಾಪಸ್ಸು ಕೊಡಲೆಂದು ಬಂದಳು.

"ಭಾತ್ ತುಂಬಾ ಚೆನ್ನಾಗಿತ್ತು. ನಿಮ್ಮ ಅತ್ತಿಗೆಗೆ ಥ್ಯಾಂಕ್ಸ್ ಹೇಳಿ ಬಿಡಿ"

"ಹೇಳ್ತೀನಿ... ನಮ್ಮ ಮನೆಗೆ ಬರುಲ್ವಾ? ಅತ್ತಿಗೆ, ಅಮ್ಮ ನಿನ್ನನ್ನು ಕೇಳ್ತಾನೇ ಇರ್ತಾರೆ"

"ಎಂದಾದ್ರೂ ಬರ್ತೀನಿ. ಅಮ್ಮ ಹೇಗಿದಾರೆ?"

"ಅವಳಿಗೂ ವಯಸ್ಸಾಯ್ತು. ಎಲ್ಲಾ ಕೆಲಸವೂ ಅತ್ತಿಗೆಯದೇ..."

"ನಾನು ಬರ್ತೀನಿ. ಮತ್ತೆಂದಾದ್ರೂ ಮಾತಾಡ್ತೀನಿ" ಎಂದು ಹೇಳಿ ಅವಳು ಹೊರಟು ಹೋಗಿದ್ದಳು. ಅವನು ಅವಳ ಬಗ್ಗೆಯೇ ಚಿಂತಿಸುತ್ತಾ ಕುಳಿತಿದ್ದ. ಬೆಲ್ ಆಗಿತ್ತು. ಎದ್ದು ಹೊರಡಲನುವಾದ.

"ಹೇಮಂಗೆ ತಿಂಡಿ ಕೊಟ್ಯಾ? ಏನಂದ್ಲು?" ಸುಶೀಲಾ ತವಕದಿಂದ ಕೇಳಿದಳು.

"ನಿಮಗೆ ಥ್ಯಾಂಕ್ಸ್ ಹೇಳಿದಾಳೆ ಅತ್ತಿಗೆ. ತಿಂಡಿ ತುಂಬಾ ಚೆನ್ನಾಗಿತ್ತು ಅಂತಂದ್ಲು"

"ಇನ್ನೇನು ಮಾತಾಡಿದ್ರಿ?"

"ನಿಮ್ಮ ಬಗ್ಗೆ, ಅಮ್ಮನ ಬಗ್ಗ... "ಅಷ್ಟರಲ್ಲಿ ಬೆಲ್ ಆಯಿತು" ಅವಳು ಹೊರಟು ಹೋದಳು. ಸುಶೀಲ ತನ್ನ ಸಂಧಾನ ಫಲಿಸುತ್ತಿದೆಯೆಂದು ಕೊಂಡಳು."

* * * * *

ಕೈಯಲ್ಲಿ ಪುಸ್ತಕ ಹಿಡಿದ ಹೇಮಾ, ಸುರೇಶನ ಬಗ್ಗೆಯೇ ಚಿಂತಿಸುತ್ತಿದ್ದಳು. "ಅವರ ಮನೆಗೆ ಹೋಗಿ ಎಷ್ಟು ವರ್ಷಗಳಾಗಿ ಹೋಯ್ತು. ಆ ಘಟನೆ ನಡೆದ ಮೇಲೆ ಮುಂಚಿನಂತೆ, ರಜದ ಸಮಯದಲ್ಲಿ ಆಗ ಈಗ ಹೋಗಿರಲೇ ಇಲ್ಲ. ಆ ಘಟನೆಯನ್ನು ನೆನೆಸಿಕೊಂಡು ಮುಜುಗರವುಂಟಾಗಿತ್ತು. ಸುರೇಶ ಈಗ ಬದಲಾಗಿದಾನೆ. ಎಷ್ಟು ತೂಕವಾಗಿ ಮಾತಾಡ್ತಾನೆ. ನೋಡಲೂ ಸುಂದರನಾಗಿದ್ದಾನೆ. ಮನ ಅವನು ಹಿಂದೆ ಇದ್ದುದಕ್ಕೂ ಈಗ ಇರುವುದಕ್ಕೂ ಇರುವ ವ್ಯತ್ಯಾಸವನ್ನು ಅಳೆಯುತ್ತಿತ್ತು.

ತಾಯಿ ಮಾಡಿದ್ದ ಅಕ್ಕಿ ರೊಟ್ಟಿ ಚಟ್ನಿಯನ್ನು ಡಬ್ಬಿಗೆ ಹಾಕಿಸಿಕೊಂಡಳು. ಸಾವಿತ್ರಿಗೆ ಆಶ್ಚರ್ಯವಾಗಿತ್ತು. "ಇದೇನೇ ಇವತ್ತು... ಬರೋದು ತಡವಾಗುತ್ತಾ?"

"ಇಲ್ಲಮ್ಮ ನನ್ನ ಸ್ನೇಹಿತರೊಬ್ಬರಿಗೆ ತೆಗೆದುಕೊಂಡು ಹೋಗ್ತಿದೀನಿ" ನಿತ್ಯಕ್ಕಿಂತ ಸ್ವಲ್ಪ ಗಮನವಿಟ್ಟು ಅಲಂಕರಿಸಿಕೊಂಡಿದ್ದಳು. ನೀಳವಾದ ಜಡೆಗೆ ಹೂ ಮುಡಿದಿದ್ದಳು. ಸಾವಿತ್ರಿಗೆ ಆಶ್ಚರ್ಯವಾಗಿತ್ತು.

ಸ್ಟಾಫ್ ರೂಂಗೆ ಸುರೇಶ ಬಂದಿದಾನೆ ಎನ್ನುವುದನ್ನು ಖಚಿತ ಪಡಿಸಿಕೊಂಡು, ತಿಂಡಿಯ ಡಬ್ಬಿಯನ್ನು ಹಿಡಿದು ಬಂದಳು. ಅವನ ಟೇಬಲ್ ಮೇಲೆ ಇಟ್ಟು

"ಅಕ್ಕಿ ರೊಟ್ಟಿ, ಚಟ್ನಿ ತಂದಿದೀನಿ ನಿಮಗೋಸ್ಕರ" ಎಂದಳು.

ಅವನು ಮುಚ್ಚಳವನ್ನು ತೆಗೆದು ಮೂಸಿ ನೋಡಿ ಕಣ್ಣರಳಿಸಿದ. "ಬಾಯಲ್ಲಿ ನೀರೂರುತ್ತಿದೆ. ಈಗಲೇ ತಿನ್ನಬೇಕು ಅಂತ ಅನ್ನಿಸ್ತಿದೆ. "ನೀನೇ ಮಾಡಿದ್ದಾ?" ಕೇಳಿದ.

"ಇಲ್ಲ, ಅಮ್ಮ ಮಾಡಿದ್ದು"

"ಅಮ್ಮಾನಾ?" ಅವನು ಅನುಮಾನದಿಂದ ಕೇಳಿದಾಗ ಅವಳು 'ಹೂಂ' ಅಂದಳು. "ಸಾಯಂಕಾಲ ಹೋಗೋಕ್ಮುಂಚೆ ಬಂದು ಡಬ್ಬೀನ ತೆಗೆದುಕೊಂಡು ಹೋಗ್ತೀನಿ" ಅವಳು ಹೇಳಿದಾಗ ಸುಮ್ಮನೆ ತಲೆಯಾಡಿಸಿದ್ದ. ಅವಳು ಡಬ್ಬಿಯನ್ನು ತೆಗೆದುಕೊಳ್ಳಲು ಬರಲಿಲ್ಲ. ಮರೆತು ಹಾಗೇ ಹೊರಟಿದ್ದಳು. ರಸ್ತೆಯ ತಿರುವಿನಲ್ಲಿ ನಡೆಯುತ್ತಿದ್ದಾಗ, ಪಕ್ಕದಲ್ಲಿ ಸ್ಕೂಟರ್ ಒಂದು ಬಂದು ನಿಂತಿತು. ಹೆಲ್ಮೆಟ್ ಹಾಕಿಕೊಂಡಿದ್ದವನು ಸುರೇಶನೆಂದು ತಿಳಿಯಲಿಲ್ಲ. ಗಾಬರಿಯಿಂದ ವೇಗವಾಗಿ ನಡೆಯಲು ನೋಡಿದಳು. ಹೆಲ್ಮೆಟ್‌ನ್ನು ತೆಗೆದು "ಏ ಹೇಮಾ" ಅಂತ ಕರೆದ. ಅವಳು ನಿಂತಳು.

"ನಿನ್ನ ಡಬ್ಬಿ.. ಅಕ್ಕಿ ರೊಟ್ಟಿ ತುಂಬಾ ರುಚಿಯಾಗಿತ್ತು. ನಿಮ್ಮ ಅಮ್ಮಂಗೆ ಖಂಡಿತಾ ಥ್ಯಾಂಕ್ಸ್ ಹೇಳ್ಬೇಕು. ಆದರೆ, ಅಮ್ಮ ಈಗ ಎಲ್ಲಿದಾರೆ?"

"ಅಮ್ಮ ನನ್ನ ಜೊತೇನೇ ಇದಾಳೆ. ಇದುವರೆಗೂ ಹಳ್ಳೀಲಿ ಇದ್ದೆವು. ಈಗ ಓದಿಸೋಕೆ ಅಂತ ನಮ್ಮಿಬ್ಬರನ್ನು ಅಮ್ಮ ಇಲ್ಲಿಗೇ ಕರೆ ತಂದಿದಾಳೆ" ಅವನಿಗೆ ಅವಳು ಮಾತುಗಳು ವಿಚಿತ್ರವೆನಿಸಿದವು. ಪೆಚ್ಚಾಗಿ ನಕ್ಕು ಸ್ಕೂಟರನ್ನು ಸ್ಟಾರ್ಟ್ ಮಾಡಿದ.

"ಬರ್ತೀಯಾ.. ನಿನ್ನ ಮನೆತನಕ ಡ್ರಾಪ್ ಕೊಡ್ತೀನಿ"

"ಬೇಡ.. ಅಮ್ಮಂಗೆ ಗೊತ್ತಾದ್ರೆ ಅಮ್ಮ ಬೈತಾಳೆ" ಅವನು ಹೊರಟು ಹೋದ.

ಹೇಮಾಳ ಪರೀಕ್ಷೆಯ ದಿನಗಳು ಹತ್ತಿರವಾಗಿದ್ದವು. ಓದುವುದರಲ್ಲಿ ಹೆಚ್ಚು ಹೆಚ್ಚು ಗಮನವನ್ನು ಕಳೆಯುತ್ತಿದ್ದಳು. ಸುರೇಶನನ್ನು ಎಷ್ಟೋ ದಿನಗಳಾದರೂ ಭೇಟಿಯಾಗಿರಲಿಲ್ಲ. ಅವನೂ ಸಿಕ್ಕಿರಲಿಲ್ಲ. ಪರೀಕ್ಷೆ ಮುಗಿದು ರಜ ಬಂದಿತ್ತು. ಹೇಮಾ ತನ್ನ ತಾಯಿಯೊಂದಿಗೆ ಹಳ್ಳಿಗೆ ಹೊರಟು ಹೋಗಿದ್ದಳು.

ರಜ ಮುಗಿದು ಎರಡನೇ ವರ್ಷದ ತರಗತಿಗೆ ಸೇರಿದಾಗ ತಿಳಿಯಿತು. ಸುರೇಶ ಲೆಕ್ಚರರ್ ಕೆಲಸವನ್ನು ಬಿಟ್ಟು ಬೇರೆ ಕೆಲಸಕ್ಕೆ ಸೇರಿದ್ದಾನೆಂದು, ಬೇರೆ ಊರಿಗೆ ಹೊರಟು ಹೋಗಿದ್ದಾನೆಂದು, ಅವಳಿಗೆ ಪಿಚ್ಚೆನ್ನಿಸಿತ್ತು. ತನ್ನ ಆಪ್ತನಾಗಿದ್ದ ಸುರೇಶ ಎಲ್ಲಿದಾನೋ? ತನಗೇಕೆ ಈ ವಿಷಯವನ್ನು ತಿಳಿಸಲಿಲ್ಲವೋ... ಮನಸ್ಸು ಮುದುರಿತು. ಪಾಠ ಪ್ರವಚನಗಳಲ್ಲಿ ಮನಸ್ಸನ್ನು ತೊಡಗಿಸಿದಳು. ಅವನನ್ನು ಮರೆಯಲು ಪ್ರಯತ್ನಿಸಿದಳು.

* * * * *

ಬಾಂಬೆಗೆ ಹೋಗಿ ಕೆಲಸಕ್ಕೆ ಸೇರಿಕೊಂಡ ಹೊಸದರಲ್ಲಿ ಸುರೇಶ, ಅಣ್ಣ ಭಾರ್ಗವನ ಸ್ನೇಹಿತ ಆನಂದನ ಮನೆಯಲ್ಲಿ ಕೆಲವು ದಿನಗಳು ಇಳಿದುಕೊಂಡ. ಹೊಸ ಊರು, ಹೊಸ ಜನರು, ತಕ್ಷಣಕ್ಕೆ ಹೊಂದಿಕೊಳ್ಳಲು ಕಷ್ಟವಾಗುತ್ತಿತ್ತು. ಆನಂದನಾದರೋ ಬಾಂಬೆಯಲ್ಲಿ ನಾಲ್ಕಾರು ವರ್ಷಗಳಿಂದ ಇದ್ದು ಅಲ್ಲಿಗೆ ಹಳಬನಾಗಿದ್ದ. ಅವನ ಪತ್ನಿ ಅನಿತಾ ನೋಡಲು ಆಕರ್ಷಕವಾಗಿದ್ದಳು, ಬೆಡಗಿಯಾಗಿದ್ದಳು. ಗಂಡಸರನ್ನು ಆಕರ್ಷಿಸುವ ಮಾತುಗಾರಿಕೆ, ವೈಯ್ಯಾರ ಎಲ್ಲಾ ಅವಳಲ್ಲಿತ್ತು. ತಲೆಗೂದಲನ್ನು ಭುಜದ ಮಟ್ಟಕ್ಕೆ ಕತ್ತರಿಸಿಕೊಂಡು ಹಾಗೆ ಬಿಟ್ಟಿರುತ್ತಿದ್ದಳು. ಮುಖಕ್ಕೆ ಮೆತ್ತಿಕೊಂಡಿರುವ ಪೌಡರ್ರು ತುಟಿಗೆ ಬಳಿದಿರುವ ಲಿಪ್‌ಸ್ಟಿಕ್, ಅವಳು ಸಿನಿಮಾ ಲೋಕದ ತಾರೆ ಎನಿಸುವಂತಿತ್ತು. ತೋಳಿಲ್ಲದ ಮೇಲುಡುಗೆ, ಮೈಗೆ ಅಂಟಿದಂತಿರುವ ಜೀನ್ಸ್ ಪ್ಯಾಂಟುಗಳು... ಸುರೇಶನಿಗೆ ಅವಳು ಮೆಚ್ಚುಗೆಯಾಗಲಿಲ್ಲ. ಅತ್ತಿಗೆಯನ್ನು ಹೇಮಾಳನ್ನು ನೆನೆಪಿಸಿಕೊಂಡ. ನಾಲ್ಕಾರು ದಿನಗಳು ಕಳೆಯುವಷ್ಟರಲ್ಲಿ, ತಾನೂ ಎಲ್ಲಿ ಅವರಂತೆಯೇ ಬದಲಾಗಿ ಬಿಡುವೇನೇನೋ ಎಂಬ ಸಂಶಯ ಕಾಡಲಾರಂಭಿಸಿತ್ತು.

ಆನಂದ ಆಗಾಗ್ಗೆ ಬೇರೆ ಊರುಗಳಿಗೆ ಟೂರ್ ಮೇಲೆ ಹೋಗುತ್ತಿದ್ದ. ಆಗ ಅನಿತಾ ಒಬ್ಬಳೇ ಮನೆಯಲ್ಲಿರುತ್ತಿದ್ದಳು. ಆಗ ಅವಳ ಸ್ನೇಹಿತ ಶೇಖರ ಇವಳೊಂದಿಗೆ ಕಾಲ ಕಳೆಯುತ್ತಿದ್ದ. ಶೇಖರ ಆನಂದನಿಗೂ ಸ್ನೇಹಿತನೇ, ಆದುದರಿಂದ ಆನಂದನಿಗೆ ಅವರಿಬ್ಬರ ಸ್ನೇಹದ ಬಗ್ಗೆ ಯಾವುದೇ ಸಂಶಯವಿರಲಿಲ್ಲ. ಅವನಿಗೆ ತಿಳಿಯದಂತೆ, ಅವರಿಬ್ಬರ ಸ್ನೇಹ ವಿಪರೀತದಲ್ಲಿತ್ತು.

ಸುರೇಶ ತಮ್ಮೊಡನೆ ಇದ್ದುದು ಅನಿತಳಿಗೆ ಸಹನೆಯಾಗಲಿಲ್ಲ. ತನ್ನ ಶೇಖರನ ಅನೈತಿಕ ಸಂಬಂಧ, ಇವನಿಂದ ತನ್ನ ಗಂಡನಿಗೆ ತಿಳಿಯಬಹುದು ಎಂಬ ಅಂಜಿಕೆ ಹುಟ್ಟಿತು. ಹಾಗಾಗಿ, ತಾನೇ ಅವನಿಗೊಂದು ಮನೆಯನ್ನು ಬಾಡಿಗೆಗೆ ಗೊತ್ತು ಮಾಡಿ ಕೊಟ್ಟು, ಮನೆಗೆ ಬೇಕಾದ ವಸ್ತುಗಳನ್ನು ಹೊಂದಿಸಿಕೊಟ್ಟಳು. ಈ ವಿಚಾರ ಆನಂದನಿಗೆ ತಿಳಿಯಲಿಲ್ಲ.

ಒಂದು ದಿನ ಅನಿತಾ ಇದ್ದಕ್ಕಿದ್ದಂತೆ, ಸುರೇಶನ ಮನೆಗೆ ಬಂದಳು. ಅವನು ಅಡಿಗೆಯ ತಯಾರಿಯಲ್ಲಿದ್ದ. ಸುರೇಶನಿಗೆ ಮೈ ಬೆವೆತಿತು. ಈ ಹೆಂಗಸಿನ

ಮನಸ್ಸಿನಲ್ಲೇನಿರಬಹುದು? ತನ್ನನ್ನು ಕೆಡಿಸಲು ಬಂದಿರಬಹುದೆ? ಆ ಅನಿಸಿಕೆಯೇ ಕಂಗೆಡಿಸಿತು.

ಸೀದಾ ಒಳ ಬಂದವಳೇ ಫ್ಯಾನಿನ ಸ್ವಿಚ್ಚನ್ನು ಅದುಮಿ ಸೋಫಾ ಮೇಲೆ ಕುಳಿತಳು. ಅವನು ಕೈ ಕಟ್ಟಿ ನಿಂತ.

"ಕೂತ್ಕೊಳ್ಳಿ ಸುರೇಶ್... ನಿಂತೇ ಇದೀರಲ್ಲ"

"ಪರವಾಗಿಲ್ಲ... ಏನು ವಿಷಯ ಹೇಳಿ... ಆನಂದ್ ಟೂರ್‌ನಿಂದ ಬಂದ್ರಾ?"

"ಇಲ್ಲಿ ನಾನು ಒಬ್ಬಳೇ ಇದೀನಿ. ನನಗೆ ಸುತ್ತಿ ಬಳಸಿ ಮಾತನಾಡಿ ಪ್ರಯೋಜನವಿಲ್ಲ. ನೇರವಾಗಿ ಹೇಳುವವಳು. ನನ್ನ ಸ್ನೇಹಿತ ಶೇಖರ್... ನಿಮಗೆ ಗೊತ್ತಲ್ಲ. ಅವನು ಕಾಲೇಜಿನಲ್ಲಿ ನನ್ನ ಸಹಪಾಠಿಯಾಗಿದ್ದವನು. ನಾನು ಅವನನ್ನು ಪ್ರೀತಿಸುತ್ತಿದ್ದೆ. ಆದರೆ ಅವನಿಗೆ ಕೆಲಸವಿಲ್ಲ. ಆದ್ದರಿಂದಲೇ ನಾನು ಆನಂದನನ್ನು ಮದುವೆಯಾದೆ. ನಾನು ಇಲ್ಲಿಗೆ ಬಂದ ನಂತರ ಅವನೂ ಈ ಊರಿಗೆ ಬಂದ. ಅವನ ಅಂಕಲ್ ಮನೆಯಲ್ಲಿದ್ದಾನೆ. ಇನ್ನು ಕೆಲಸದ ತಲಾಶ್‌ನಲ್ಲೇ ಇದಾನೆ."

"ಒಂದು ದಿನ ಆನಂದ್ ಮನೆಯಲ್ಲಿ ಇಲ್ಲದ ಸಮಯದಲ್ಲಿ ಅವನು ನಮ್ಮ ಮನೆಗೆ ಬಂದ. ಸಲುಗೆಯಿಂದ ಮಾತನಾಡಿಸಿದ. ಮೈ ಮುಟ್ಟಿದ. ನಂತರ ನಡೆದದ್ದೇ ಬೇರೆ. ಅವನು ನನ್ನನ್ನು ಮರುಳು ಮಾಡಿದ. ತನ್ನ ಪ್ರೀತಿಯಲ್ಲಿ ನನ್ನನ್ನು ತೇಲಾಡಿಸಿದ. ಅವನು ಕೊಟ್ಟ ಸುಖ ನನ್ನನ್ನು ಮತ್ತಳನ್ನಾಗಿಸಿತು. ಅವನ ಸಂಗ ಮತ್ತೆ ಮತ್ತೆ ಬೇಕೆನಿಸಿತು. ಸಮಾಜದ ಕಣ್ಣಿಗೆ ನನ್ನ ಅವನ ಸಂಬಂಧ ಅನೈತಿಕ ಅನ್ನಿಸಬಹುದು. ಆದರೆ, ನಮ್ಮಿಬ್ಬರ ಪ್ರೀತಿ ಗಾಢವಾಯಿತು. ನಾವಿಬ್ಬರೂ ಹ್ಯಾಪಿಯಾಗಿದ್ದೇವೆ."

"ಇದನ್ನೆಲ್ಲಾ ನನಗ್ಯಾಕೆ ಹೇಳ್ತಿದೀರಿ?"

"ಇದುವರೆಗೂ ಆನಂದನ ಕಡೆಯವರ್‍ಯಾರೂ ನಮ್ಮ ಮನೆಯಲ್ಲಿ ಇಳಿದು ಕೊಂಡಿರಲಿಲ್ಲ. ನೀವು ಅಲ್ಲಿದ್ದಾಗ ಶೇಖರ ಆಗಾಗ್ಗೆ ಬರುತ್ತಿದುದನ್ನು ನೀವು ಗಮನಿಸಿರಬಹುದು. ನಮ್ಮ ಚೆಲ್ಲಾಟವನ್ನು ಊಹಿಸಿರಬಹುದು. ಈಗ ನಮ್ಮಿಬ್ಬರ ಸಂಬಂಧ ಹೀಗೆ ಮುಂದುವರೆಯುತ್ತದೆ. ಆದರೆ ಈ ವಿಷಯ ಆನಂದನಿಗೆ ತಿಳಿಯದಂತೆ ನಾವಿಬ್ಬರೂ ಎಚ್ಚರ ವಹಿಸಿದೀನಿ. ನೀವೂ ಅವರಿಗೆ ತಿಳಿಸಬಾರದು."

"ನಾನೇಕೆ ತಿಳಿಸಲಿ? ಇದು ನನಗೆ ಸಂಬಂಧ ಪಡದ ವಿಷಯ" ಜಿಗುಪ್ಸೆಯಿಂದ ನುಡಿದ.

"ಗುಡ್.. ಹೀಗೇ ಏನೂ ತಿಳಿಯದವರಂತೆ ಇದ್ದರೆ ಒಳ್ಳೆಯದೇ. ನನಗೆ ಆನಂದನೂ ಬೇಕು, ಶೇಖರನೂ ಬೇಕು. ನನ್ನ ಪರಿಸ್ಥಿತಿ ಆಗಿದೆ"

"ನಿಮ್ಮ ಪರಿಸ್ಥಿತಿ ತಪ್ಪೋ, ಸರಿಯೋ ನಾನು ವಿಶ್ಲೇಷಿಸಲಾರೆ. ಆದರೆ ನಾನು ನಿಮ್ಮ ಪತಿಗೆ ನಿಮ್ಮಿಬ್ಬರ ಬಗ್ಗೆ ಏನನ್ನು ಹೇಳೊಲ್ಲ. ಇದು ನಿಜ" ಅವಳು ಹೋದರೆ ಸಾಕೆಂದು ಕಾತರಿಸಿದ. ಅವಳು ಹೋದ ಮೇಲೂ ಬಹಳ ಹೊತ್ತಿನವರೆಗೂ ಅವಳನ್ನು ಕುರಿತೇ ಚಿಂತಿಸುತ್ತಿದ್ದ.

* * * * *

ಹೀಗೇ ಅತ್ತಿಗೆ ತನ್ನ ಅಣ್ಣನಿಗೆ ತಿಳಿಯದಂತೆ ಅವನಿಗೆ ಮೋಸ ಮಾಡಿದರೇ.. ತನ್ನ ಹೆಂಡತಿಯಾದವಳೂ ತನಗೂ ಮೋಸ ಮಾಡಿದರೆ!.. ಅತ್ತಿಗೆ ಈ ಮುಂಚೆ ಯಾರನ್ನಾದ್ರೂ ಪ್ರೀತಿಸ್ತಿದ್ರಾ ಅಂತ ತಿಳ್ಕೋಬೇಕು... ತನ್ನ ಹೆಂಡತಿಯಾಗುವವಳ ಬಳಿ ಮೊದಲೇ ಮಾತನಾಡಿ ಅವಳು ಯಾರನ್ನು ಪ್ರೀತಿಸುತ್ತಿಲ್ಲವೆಂದು ಖಚಿತ ಪಡಿಸಿಕೊಳ್ಳಬೇಕೆಂದು ಕೊಂಡು ಅತ್ತಿಗೆಗೆ ದೀರ್ಘವಾದ ಒಂದು ಪತ್ರವನ್ನು ಬರೆದ.

ಅನಿತಾಳ ವಿಷಯವನ್ನು ತಿಳಿಸಿ, ಮದುವೆಯಾದ ಹೆಂಗಸರು ಹೀಗೆ ಮೋಸಗಾರ್ತಿಯಾಗಿರುತ್ತಾರೆಂದು ನಾನು ಅಂದುಕೊಂಡಿರಲಿಲ್ಲ. ನನಗ್ಯಾಕೋ ತುಂಬಾ ಭಯವಾಗುತ್ತೆ ಅಂತ ಬರೆದಿದ್ದ. ಅವಳು ಆ ಪತ್ರವನ್ನು ಗಂಡನಿಗೆ ತೋರಿಸಿದಳು.

"ನಿಮ್ಮ ತಮ್ಮ ತುಂಬಾ ಮುಗ್ಧರು. ಬಾಂಬೆಯಂತಹ ಊರಿನಲ್ಲಿ ಒಬ್ಬರೇ ಇರುವುದು ಸರಿಯಲ್ಲ. ಅನಿತಳಂಥಾ ಹೆಂಗಸರ ಸ್ನೇಹ ಬಹಳ ಕೆಟ್ಟದ್ದು. ಆದಷ್ಟು ಬೇಗ ಅವರಿಗೂ ಮದುವೆ ಮಾಡಿ ಬಿಟ್ಟರೆ ಒಳ್ಳೆಯದು. ಅಮ್ಮನ ಹತ್ತಿರ ಮಾತನಾಡಿ" ಎಂದಿದ್ದಳು. ಹಾಗೇ ಸುರೇಶನಿಗೆ ಪತ್ರವನ್ನು ಬರೆದಿದ್ದಳು.

"ನಿನಗೆ ಹೇಮಾಳ ಮೇಲೆ ಪ್ರೀತಿ ಇದೆ, ನನಗೆ ಗೊತ್ತು. ನೀನು ಒಪ್ಪುವುದಾದರೆ, ನಾವಿಬ್ಬರೂ ಹೇಮಾಳ ಮನೆಗೆ ಹೋಗಿ ಮಾತನಾಡಿ ಬರ್ತೀನಿ" ಎಂದು ಬರೆದಿದ್ದಳು.

* * * * *

ಇದ್ದಕ್ಕಿದ್ದಂತೆ ಬಂದಿಳಿದ ಸುರೇಶನನ್ನು ಕಂಡು ಮನೆಯವರು ಆಶ್ಚರ್ಯಗೊಂಡರು.

"ಇದೇನೋ ಇಷ್ಟು ಬಡವಾಗಿ ಹೋಗಿದೀಯ. ಊಟ ತಿಂಡಿ ಸರಿಯಾಗಿ ಮಾಡ್ತಿದ್ಯೋ, ಇಲ್ಲವೋ?"

"ಅಲ್ಲಿ ಏನೂ ಸರಿಯಿಲ್ಲಮ್ಮ. ಯಾಕೋ ಅಲ್ಲಿಗೆ ಹೊಂದಿಕೊಳ್ಳಲೇ ಆಗಲಿಲ್ಲ. ಬಿಟ್ಟು ಬಂದು ಬಿಟ್ಟೆ. ಇನ್ನು ನಾಲ್ಕು ದಿನ ನೋಡ್ತಿರು. ಅತ್ತಿಗೆಯ ಕೈಯ ತಿಂಡಿ ಊಟ ಮಾಡಿ. ಹೇಗೆ ಊದಿಕೊಳ್ತೀನಿ ಅಂತ" ನಗಿಸಲು ಪ್ರಯತ್ನಿಸಿದ್ದ.

"ನಿನಗೇನು ಬೇಕೋ ಕೇಳು. ಖಂಡಿತಾ ಮಾಡಿಕೊಳ್ತಾಳೆ. ಅವಳಿಗೆ ನನಗಿಂತ ನಿನ್ನ ಮೇಲೆ ಪ್ರೀತಿ ಜಾಸ್ತಿ. ಸದಾ ನಿನ್ನದೇ ಧ್ಯಾನ" ಭಾರ್ಗವನೆಂದ.

"ಹೌದಾ ಅತ್ತಿಗೆ! ಇದು ತಪ್ಪು. ಹೀಗೆ ಮಾತ್ರ ಮಾಡ್ಬೇಡಿ. ನಮ್ಮ ಅಣ್ಣನನ್ನು ಚೆನ್ನಾಗಿ ನೋಡ್ಕೊಳ್ಳಿ" ಅವನು ಗಂಭೀರವಾಗಿ ನುಡಿದಾಗ, ಇಬ್ಬರಿಗೂ ಅವನು ಬರೆದ ಪತ್ರದ ನೆನಪಾಗಿತ್ತು.

ಸುಶೀಲಾ ಬಿಸಿ ಬಿಸಿ ಕಾಫಿಯನ್ನು ತಂದಿತ್ತು, ಉಪಚರಿಸಿದಳು. ಊಟದ ನಂತರ ಅಣ್ಣ ತಮ್ಮ ಇಬ್ಬರೂ ತಂಗಾಳಿ ಸೇವನೆಗೆಂದು ಹೊರಟರು.

"ಅದ್ಯಾಕೆ ಹಾಗೆ ದಿಢೀರನೆ ಬಿಟ್ಟು ಬಂದು ಬಿಟ್ಟೆ? ಆನಂದನ ಹೆಂಡತಿ ಏನಾದ್ರೂ ತೊಂದರೆ ಕೊಟ್ಟಳಾ?"

"ಇಲ್ಲ ಭಾರ್ಗವ.. ಹಾಗೇನೂ ಆಗಲಿಲ್ಲ. ಆದರೆ ಆನಂದನ ಆರೋಗ್ಯವೇ ಸರಿಯಿಲ್ಲ. ಅದೇನೇನೋ ಪರೀಕ್ಷೆ ಮಾಡಿಸಿದನಂತೆ"

"ಹುಂ.. ಅದೆಲ್ಲಾ ನನಗೂ ತಿಳಿಯಿತು. ಅವನ ಅನಾರೋಗ್ಯಕ್ಕೆ ಅವನ ಹೆಂಡತಿಯೇ ಕಾರಣ. ಅವಳು ಶೇಖರನ ಸಹವಾಸವನ್ನು ಮಾಡಬಾರದಾಗಿತ್ತು"

"ಹಾಗಾದರೆ ಆನಂದನಿಗೆ ಹೆಂಡತಿಯ ಬಗ್ಗೆ ತಿಳೀತೆ?"

"ಹೂಂ, ತಿಳೀತು. ಆದರೆ ಬಹಳ ತಡವಾಗಿ"

"ಹೆಂಡತಿಗೆ ಡೈವೋರ್ಸ್ ಕೊಟ್ಟಿದ್ದರೆ ಆಗ್ತಿತ್ತು. ಆದರೆ..."

"ಡೈವೋರ್ಸ್ ಕೊಟ್ಟರೂ, ಯಾರಿಗೂ ಸುಖವಿಲ್ಲ. ನಿನಗೆ ತಿಳಿಯದ ವಿಷಯ ಒಂದಿದೆ. ಶೇಖರನಿಗೆ ಮದುವೆಯಾಗಿತ್ತು. ಆದರೆ ಅವನ ಹೆಂಡತಿಯ ನಡತೆ ಸರಿಯಾಗಿರಲಿಲ್ಲ. ಅವಳಿಂದ ಅವನಿಗೆ ಯಾವ ರೀತಿಯ ಸುಖವೂ ಇರಲಿಲ್ಲ. ಈ ಮಧ್ಯೆ ಅವಳು ಏಡ್ಸ್ ರೋಗಿಯಾಗಿದಾಳೆಂದು ಅವನಿಗೆ ಹೇಗೋ ತಿಳಿಯಿತು. ಆ ನಂತರ ಅವನೇ ಅವಳನ್ನು ದೂರವಿಟ್ಟು ತಾನೂ ಬಾಂಬೆಗೆ ಹೋಗಿ ಅಲ್ಲಿಯೇ ಇದ್ದು ಬಿಟ್ಟ. ಆದರೆ ಅವನು ಈ ವಿಷಯಗಳನ್ನು ಅನಿತಾಳಿಗೆ ತಿಳಿಸಲೇ ಇಲ್ಲ. ಅವಳಿಗೆ ದ್ರೋಹ ಮಾಡಿಬಿಟ್ಟ. ಅವನ ಮಾತಿಗೆ ಮರುಳಾಗಿ ಅವಳು ತಾನೂ ಬಲಿಯಾದಳು. ಆನಂದನೂ ಮೋಸ ಹೋದ. ಶೇಖರ ತನಗೆ ಅಂಟಿದ್ದ ಎಚ್.ಐ.ವಿ.ಯನ್ನು ಅನಿತಾಳಿಗೆ ವರ್ಗಾವಣೆ ಮಾಡಿದ. ಅವಳಿಂದ ಆನಂದನಿಗೆ ತಗುಲಿತು. ಈಗ ಅವರೆಲ್ಲರೂ ರೋಗಿಗಳೇ. ನಿಟ್ಟುಸಿರು ಬಿಟ್ಟ.

"ನಿನಗೆ ಈ ವಿಷಯ ಹೇಗೆ ತಿಳಿಯಿತು"

"ನೀನು ನಿನ್ನ ಅತ್ತಿಗೆಗೆ ಪತ್ರ ಬರೆದಿದ್ದೆಯಲ್ಲ.. ತಕ್ಷಣವೇ ನಾನು ಆನಂದನಿಗೆ ಫೋನು ಮಾಡಿ, ಅವನ ಹೆಂಡತಿಯ ದುರಾಚಾರದ ಬಗ್ಗೆ ತಿಳಿಸಿದೆ. ಅವನಿಗೆ ಶಾಕ್ ಆಗಿತ್ತು. ಕೆಲವು ವಾರಗಳ ಹಿಂದೆ ನನ್ನ ಆಫೀಸಿಗೆ ಬಂದಿದ್ದ. ತನ್ನ ದುರಂತ ಕತೆಯನ್ನು ಹೇಳಿಕೊಂಡು ವ್ಯಥೆ ಪಟ್ಟ. ಅನಿತಾ ತಾನೂ ಹಾಳಾದಳು ಗಂಡನನ್ನು ಹಾಳು ಮಾಡಿದಳು"

"ಈ ಹೆಂಗಸರೇ ಹೀಗೆ. ನನಗೆ ನಂಬಿಕೆಯೇ ಇಲ್ಲವಾಗುತ್ತಿದೆ"

"ಅನಿತಾಳ ಹಾಗೆ ಎಲ್ಲರೂ ಕೆಟ್ಟವರೆಂದು ಭಾವಿಸಬೇಡ ಸುರೇಶ. ಅಮ್ಮನಂಥವರು, ನಿನ್ನ ಅತ್ತಿಗೆಯಂಥವರು ಇರುತ್ತಾರೆ ಅಲ್ವಾ!.."

"ಅತ್ತಿಗೆ ಒಳ್ಳೆಯವರು ಅಲ್ವಾ ಅಣ್ಣಾ... ನಿನ್ನನ್ನು ಚೆನ್ನಾಗಿ ನೋಡ್ಕೋತಾರೆ ಅಲ್ವಾ?"

"ನೀನ್ಯಾಕೆ ಹೀಗೆ ಉದ್ವೇಗಕ್ಕೆ ಒಳಗಾಗ್ತೀಯ? ನಿನಗೊಂದು ಗುಡ್ ನ್ಯೂಸ್ ಇದೆ. ಇನ್ನು ಆರೇಳು ತಿಂಗಳಿಗೆ ನೀನು ಚಿಕ್ಕಪ್ಪನಾಗ್ತಿದೀಯ"

ಅವನಿಗೆ ಅರ್ಥವಾಗಲು ಕೆಲವು ಗಳಿಗೆ ಹಿಡಿಯಿತು. ಅಣ್ಣನ ಕೈಗಳನ್ನು ಹಿಡಿದು ಕುಲುಕಿದ "ಕಂಗ್ರಾಟ್ಸ್" ಎಂದ.

"ಅತ್ತಿಗೇನ ನೀನು ಚೆನ್ನಾಗಿ ನೋಡ್ಕೋಬೇಕು. ಅವರು ಮನೆಯ ಕೆಲಸವನ್ನು ಮಾಡ್ತಾರೆ. ಅವರಿಗೆ ರೆಸ್ಟ್ ಸಿಗುವಂತೆ ಮಾಡಬೇಕು"

"ಹಾಗಾದ್ರೆ ನೀನು ಆದಷ್ಟು ಬೇಗ ಮದುವೆಯಾಗು. ನಿನ್ನ ಹೆಂಡತಿ ನಮ್ಮ ಮನೆಗೆ ಬಂದರೆ, ನಿನ್ನ ಅತ್ತಿಗೆಗೆ ಅರ್ಧ ಕೆಲಸ ಕಡಿಮೆ ಆಗುತ್ತೆ"

"ನನಗೆ ಮದುವೆ ಅಂದ್ರೆ ಭಯ ಆಗುತ್ತೆ"

"ಭಯ ಯಾಕೆ? ಹೇಮಾ ಒಳ್ಳೆಯ ಹುಡುಗಿ. ನಮ್ಮ ಮನೆಗೆ ಬಹಳ ಬೇಗ ಹೊಂದಿಕೊಳ್ತಾಳೆ" ಸುರೇಶ ಮಾತನ್ನು ಮುಂದುವರೆಸದೇ ಸುಮ್ಮನಾದ.

ಅಡುಗೆ ಮನೆಯಲ್ಲಿ ಕೆಲಸದಲ್ಲಿ ತೊಡಗಿದ್ದ ಅತ್ತಿಗೆಯ ಬಳಿಗೆ ಬಂದ.

"ಅತ್ತಿಗೇ ಹೇಮಾಳ ಹತ್ತಿರ ಮಾತಾಡಿದ್ರಾ? ಏನಂದ್ಲು?"

"ಅವಳಿಗೆ ನಿನ್ನ ಮೇಲೆ ಕೋಪ. ನೀನು ಅವಳಿಗೆ ಒಂದು ಮಾತನ್ನು ಹೇಳದೆ ಬಾಂಬೆಗೆ ಹೊರಟು ಹೋದೆ ಅಂತ. ನೀನು ಅಲ್ಲಿಂದ ಪತ್ರವನ್ನಾದರೂ ಬರೆಯಬಹುದಾಗಿತ್ತು ಅಂತ ಅಂದ್ಲು. ಅವಳು ಹೇಳಿದ್ದೂ ಸರಿ ಅಂತ ಅನ್ನಿಸ್ತು. ನೀನ್ಯಾಕೆ ಹಾಗೆ ಮಾಡ್ದೇ?"

"ಕಡೇ ಸಲ ಅವಳನ್ನು ಭೇಟಿಯಾದಾಗ ಅವಳು ವಿಚಿತ್ರವಾಗಿ ವರ್ತಿಸಿದಳು ಅಂತ ಅನ್ನಿಸ್ತು. ಅವರ ಅಮ್ಮ ಬದುಕಿದಾರೆ ಅನ್ನೋ ಥರ ಮಾತಾಡಿದ್ಲು. ಅದು ಸುಳ್ಳಲ್ವಾ?"

"ಇಲ್ಲ ಸುರೇಶ... ಆಕೆ ಬದುಕಿದಾರೆ... ಅವಳ ಮಾತು ನಿಜ"

"ಅಂದ್ರೇ ಅಮ್ಮ ಹೇಳಿದ್ದು ಸುಳ್ಳಾ?"

"ನಿಮ್ಮ ತಾಯಿಗೆ ಯಾರೋ ಸುಳ್ಳು ವಾರ್ತೆ ಕೊಟ್ಟಿದಾರೆ. ಆಕೆ ಚೆನ್ನಾಗಿಯೇ ಇದಾರೆ. ಆದರೆ ಆಕೆಯ ಗಂಡ ಈಗಿಲ್ಲ. ಈಗ ಆಕೆ ಹಳ್ಳಿಯನ್ನು ಬಿಟ್ಟು ಬಂದು ಇಲ್ಲಿಯೇ ಇದಾರೆ. ಹೇಮಾನ ಓದು ಮುಗಿದ ಕೂಡಲೇ ಅವಳಿಗೆ ಮದುವೆ ಮಾಡುತ್ತಾರಂತೆ"

"ಅದಕ್ಕೆ ನೀವೇನು ಹೇಳಿದ್ರಿ.. ನನ್ನ ಮೈದುನ ಮದುವೆಗಿದಾನೆ ಅಂತ ಹೇಳಿ ಬಿಟ್ರಾ?"

"ನಾನು ನಿನ್ನ ಹಾಗೆ ಆತುರದ ಪ್ರವೃತ್ತಿಯವಳಲ್ಲ"

"ಹಾಗಾದ್ರೆ ಸುಮ್ಮನಿದ್ದು ಬಿಟ್ರಾ?"

"ನಾನೇನು ಮಾಡಬೇಕಾಗಿತ್ತು, ನೀನೇ ಹೇಳು"

"ಹೇಮಾಳನ್ನು ನಮ್ಮ ಮನೆಗೆ ಕರೆ ತಂದು, ಅಡಿಗೆ ಕೆಲಸವನ್ನು ಮೊದಲು ಕಲಿಸಿ, ಅವಳಿಗೆ ಏನೂ ಬರೊಲ್ಲ"

"ನಿಂಗೆ ಹೇಗೆ ಗೊತ್ತು?"

"ಒಂದು ದಿನ ಅಕ್ಕಿ ರೊಟ್ಟಿ ಚಟ್ನಿಯನ್ನು ನನಗಾಗಿ ತಂದಿದ್ಲು. ನೀನು ಮಾಡಿದ್ದಾ ಅಂತ ಕೇಳಿದೆ. ಅಲ್ಲ ನಮ್ಮಮ್ಮ ಎಂದಳು. ಬರೀ ಸುಳ್ಳು ಹೇಳಿದಳು. ಯಾರು ಮಾಡಿದ್ದೋ"

"ಅದಕ್ಯಾಕೆ ನಿನಗೆ ಕೋಪ... ನಾಳೇನೇ ಹೋಗಿ ಅವಳನ್ನು ಕರ್ರೊಂಡು ಬರ್ತೀನಿ"

"ನೀವೇನೂ ಹೋಗ್ಬೇಡಿ. ನಿಮಗೆ ಆಯಾಸ ಆಗುತ್ತೆ. ನಾನು ಚಿಕ್ಕಪ್ಪ ಆಗ್ತಿದೀನಂತೆ. ನೀವು ಹೇಳಲೇ ಇಲ್ಲ"

"ಇದೆಲ್ಲ ಹೆಂಗಸರ ವಿಷಯ. ನಿನಗೆ ಹೇಗೆ ಹೇಳೋದು. ನನಗೆ ನಾಚಿಕೆ ಆಗುಲ್ವಾ?" ಅವಳು ನಾಚಿದ್ದಳು.

"ಮತ್ತೆ? ಅಣ್ಣಂಗೆ ಹೇಳಿದೀರಿ"

"ನೀನೊಬ್ಬ ಪೆದ್ದ. ಏನೇನೋ ಪ್ರಶ್ನೆ ಕೇಳ್ತೀಯ. ಹೊತ್ತಾಯ್ತು ಮಲಕ್ಕೋ ಹೋಗು. ನಿಮ್ಮ ಅಣ್ಣ ನಮ್ಮಿಬ್ಬರನ್ನು ಬೈತಾರೆ ಅಷ್ಟೇ" ಸುಶೀಲ ಅವನನ್ನು ಕಳಿಸಿದಳು.

ಸುರೇಶ ಹೇಮಾಳ ಮನೆಗೆ ಬಂದಾಗ ಅವಳನ್ನು ಕಾಲೇಜಿನಿಂದ ಬಂದಿರಲಿಲ್ಲ. ಸಾವಿತ್ರಿಗೆ ಅವನ ಗುರುತು ಸಿಕ್ಕಲಿಲ್ಲ. ಇವನೇ ತನ್ನ ಪರಿಚಯವನ್ನು ಹೇಳಿಕೊಂಡಾಗ ಅವಳು ಸಂತೋಷಗೊಂಡಳು. ಅವನಿಗೆ ಕಾಫಿಯನ್ನು, ಕೋಡು ಬಳೆಗಳನ್ನು ಕೊಟ್ಟು ಮಾತನಾಡಿಸಿದಳು.

"ಹೇಮಂಗೆ ಅಡಿಗೆ ಕೆಲಸ ಕಲಿಸಿದೀರಾ ಆಂಟೀ.."

"ಇಲ್ಲಪ್ಪಾ... ಅವಳಿಗೆ ಓದು ಬರಹವೇ ಸಾಕಷ್ಟಿರುತ್ತೆ. ಬಿಡುವೇ ಇರೊಲ್ಲ. ಗಂಡನ ಮನೇಲಿ ಕಲೀತಾಳೆ ಬಿಡು"

"ನಮ್ಮ ಮನೆಗೆ ಕಳಿಸಿ. ನಮ್ಮ ಅತ್ತಿಗೆ ಚೆನ್ನಾಗಿ ಮಾಡ್ತಾರೆ. ಕಲೀಲಿ..."

"ಹೇಳಿದ್ನಲ್ಲ, ಬಿಡುವೆಲ್ಲಿದೆ? ಅವಳಿನ್ನು ಬರಲಿಲ್ಲವಲ್ಲ" ಆಕೆ ಮುಂಬಾಗಿಲಿನಲ್ಲಿ ನಿಂತು ನೋಡುವಾಗ ಅವನು ಹೊರಟ. ಅವಳು ಬರುವ ದಾರಿಯಲ್ಲಿ ಸ್ವಲ್ಪ ದೂರ ನಡೆದ. ಎದುರಿಗೆ ಬರುತ್ತಿದ್ದವಳನ್ನು ವೇಗವಾಗಿ ಹೋಗಿ ಸಮೀಪಿಸಿದ.

"ಅರೇ.. ಹೇಮಾ ಅಲ್ವಾ?" ಹತ್ತಿರ ನಿಂತು ಕೇಳಿದ.

"ನೀವ್ಯಾರೋ ನಂಗೆ ಗೊತ್ತಾಗ್ಲಿಲ್ಲ"

"ಸರಿಯಾಗಿ ನೋಡಿ ಹೇಳು" ಎನ್ನುತ್ತಾ ಅವಳ ಕೈ ಹಿಡಿದ. ಅವಳು ಕೊಸರಿಕೊಂಡಳು. "ಈಗ ಹೇಳು" ಅವಳ ಮುಖದ ಹತ್ತಿರಕ್ಕೆ ಮುಖವನ್ನು ಒಡ್ಡಿದ.

"ಇದು ರಸ್ತೆ, ಜನ ನೋಡ್ತಾರೆ" ಅವನು ಕೈ ಬಿಟ್ಟ. ಅವಳು ವೇಗವಾಗಿ ಹೊರಟು ಹೋಗಿದ್ದಳು. ಕಿರುನಗೆ ನಕ್ಕು ಮುಂದೆ ಹೆಜ್ಜೆ ಹಾಕಿದ್ದ.

* * * * *

ವೇಗವಾಗಿ ಬಂದುದರಿಂದ ಅವಳು ಏದುಸಿರು ಬಿಡುತ್ತಿದ್ದಳು. ಅವಳ ಎದೆಯ ಏರಿಳಿತ ಹೆಚ್ಚಾಗಿತ್ತು.

ಏನೇ ಏನಾಯ್ತೆ? ಓಡಿ ಬಂದೆಯಾ? ಸಾವಿತ್ರಿ ವಿಚಾರಿಸಿದಳು. ಅವಳು ಉತ್ತರಿಸಲಿಲ್ಲ. ಐದು ನಿಮಿಷ ಮುಂಚೇನಾದ್ರು ಬಂದಿದ್ರೆ... ಗಿರಿಜಮ್ಮನ ಮಗ ಸುರೇಶ ಬಂದಿದ್ದ.

"ಏನು ಹೇಳ್ದ ಅವನು?" ತಾಯಿ ಏನು ಹೇಳುವಳೋ ಎಂದು ಕಾತುರದಿಂದ ಆಲಿಸಿದಳು.

"ಏನೂ ಹೇಳಿಲ್ಲ. ಹಾಗೆ ಬಂದ, ಹೀಗೆ ಹೋದ"

"ಕಾಫಿ ತಿಂಡೀನಾದ್ರೂ ಕೊಡಬೇಕಾಗಿತ್ತು"

"ಹೂಂ ಕೊಟ್ಟೆ. ಕೋಡು ಬಳೆ ಚೆನ್ನಾಗಿದೆ ಅಂತ ನಾಲ್ಕು ತಿಂದ"

"ತಿಂಡಿ ಪೋತ..."

"ಗಿರಿಜಮ್ಮ ಮಕ್ಕಳನ್ನು ಬೆಳೆಸಿರುವುದೇ ಹಾಗೆ. ಈಗ ಸೊಸೆಯೂ ಅಂತೋಳೆ. ಅವಳಿಗೆ ಎಲ್ಲಾ ಬರುತ್ತಂತೆ. ಹೇಮನ್ನ ಕಳಿಸಿಕೊಡಿ. ಕಲಿಯಲಿ ಅಂತ ಹೇಳ್ದ"

"ಯಾಕೆ? ಅವನ ಮನೆಯ ಅಡಿಗೆಯವಳಾಗಿ ಇರಬೇಕಂತಾ?"

"ಅದೇನೋ ಬಾಯ್ಬಿಟ್ಟು ಏನನ್ನು ಹೇಳಲಿಲ್ಲ. ಅವತ್ತು ಬಂದಿದ್ದಲ್ಲ ಅವನ ಅತ್ತಿಗೆ ಅವಳೂ ಅಷ್ಟೇ... ಸುಮ್ಮನೇ ಬಂದು ಹೋದ್ಲು. ನಾವು ನಾವು ಎಷ್ಟು ಆಪ್ತರಾಗಿದ್ದೆವು. ನಾನು ಹಳ್ಳಿಗೆ ಹೋದ್ಮೇಲೆ ಆ ಸ್ನೇಹವೇ ಹೊರಟು ಹೋಯ್ತು. ಒಬ್ಬರನ್ನೊಬ್ಬರು ಮರತೇ ಬಿಟ್ಟೆವು"

"ಒಳ್ಳೇದೇ ಆಯ್ತು, ನಮಗ್ಯಾಕೆ? ಅವರ ಪಾಡು ಅವರಿಗೆ, ನಮ್ಮ ಪಾಡು ನಮಗೆ"

"ಯಾಕೆ ಹೀಗೆ ಮಾತಾಡ್ತೀಯಾ? "ರಜ ಬಂದ ಕೂಡ್಩ೇ ಅವರ ಮನೆಗೆ ಹೋಗ್ಬೇಕು ಅಂತ ಹಠ ಹಿಡಿಯುತ್ತಿದ್ದೆ"

"ಬಿಡಮ್ಮ ಆ ಮಾತು ಯಾಕೀಗ? ಹಾಗೆ ಹೇಳಿದರೂ, ಆ ದಿನದ ಘಟನೆ ಮತ್ತೆ ನೆನಪಾಗಿತ್ತು. ತಾನು ಒದ್ದೆ ಬಟ್ಟೆಯಲ್ಲಿ ಬಾಗಿಲ ಹಿಂದೆ ನಿಂತಿದ್ದು, ಇವನು ನೋಡಿ ಉದ್ಗಾರವೆತ್ತಿದ್ದು. ಅದನ್ನು ಮರೆಯಲಾಗಿರಲಿಲ್ಲ. ಸುರೇಶನಿಗೂ ಆ ಘಟನೆ ನೆನಪಿಸಲ್ಲಿರಬಹುದೇ.. ಅವನೇನಂದುಕೊಂಡಿರಬಹುದು? ಯಾಕಾದ್ರೂ ಅವರ ಮನೆಗೆ ಹೋಗಿದ್ನೋ, ತಲೆ ಸ್ನಾನ ಮಾಡಿದ್ದು ಬೇರೆ. ದರಿದ್ರ ಹೇನಿನ ಕಾಟ, ಅದಿಲ್ಲದೇ ಇದ್ದಿದ್ದರೇ ಈಗಲೂ ಕೂದಲು ಸೊಂಪಾಗಿದೆ. ಆದರೆ ಹೇನು ಇಲ್ಲ. ತಲೆ ತುಂಬಾ ಹೇನಿದ್ದವಳು ಅಂತ ಅವನು ನಕ್ಕಿದ್ದರೇ, ಅವಳಿಗೆ ತನ್ನ ಮೇಲೆ ಕೋಪ ಬಂದಿತು. ಮುಖವನ್ನು ಊದಿಸಿಕೊಂಡು ಕನ್ನಡಿಯ ಮುಂದೆ ನಿಂತಳು.

* * * * *

ಬೇರೆ ಕೆಲಸಕ್ಕಾಗಿ ಅಲೆದಾಡುತ್ತಿದ್ದ ಸುರೇಶ, ಒಮ್ಮೊಮ್ಮೆ ಹೇಮಾಳನ್ನು ಕಾಣಲೆಂದು ಕಾಲೇಜಿನ ಬಳಿಗೆ ಬಂದಿರುತ್ತಿದ್ದ. ಮೊದ ಮೊದಲು ಅವಳು ಸರಿಯಾಗಿ ಮಾತನಾಡದಿದ್ದರೂ, ಕ್ರಮೇಣ ಅವನಿಗೆ ಹೊಂದಿಕೊಂಡಳು. ಹರಟೆ, ನಗು, ಮುನಿಸು, ವ್ಯಂಗ್ಯದ ಮಾತುಗಳಲ್ಲಿ ಸಮಯ ಕಳೆಯುತ್ತಿತ್ತು. ಅವನ ಮೇಲೆ ಅವಳ ಆಸಕ್ತಿ ಬೆಳೆಯಿತು. ಅವನು ಬಾರದೇ ಇದ್ದ ದಿನ, ಬೇಸರ ಅಧಿಕವಾಗುತ್ತಿತ್ತು.

ಮಂಡ್ಯದ ಸಕ್ಕರೆ ಕಾರ್ಖಾನೆಯಲ್ಲಿ ಅವನಿಗೆ ಕೆಮಿಸ್ಟ್ ಆಗಿ ಕೆಲಸ ಸಿಕ್ಕಿತ್ತು. ಮೊದಲು ಈ ಸುದ್ದಿಯನ್ನು ಹೇಮಾಳಿಗೆ ಹೇಳಿದ. ನಂತರ ಅತ್ತಿಗೆಗೆ ತಿಳಿಸಿದ. "ನಾನು ವಾರಕ್ಕೊಮ್ಮೆ ಊರಿಗೆ ಬರ್ತೀನಿ. ನಮ್ಮ ಮನೆಗೆ ನೀನೇ ಬರ್ಬೇಕು"

"ಯಾಕೆ? ತಿಂಡಿ ಅಡಿಗೆ ಕಲಿಯೋಕಾ?"

"ಯಾಕೇ ಕೋಪ ಹೇಮಾ? ಅದರಲ್ಲಿ ತಪ್ಪೇನು? ನಿನಗೇ ಬರುತ್ತಲ್ಲ... ಅದನ್ನ ಅತ್ತಿಗೆಗೆ ಹೇಳಿ ಕೊಡು"

"ನನಗೆ ಹೇಳಿ ಕೊಡೋಕೂ ಇಷ್ಟವಿಲ್ಲ. ಕಲಿಯೋಕೂ ಇಷ್ಟವಿಲ್ಲ. ನಾನು ಈಗ ಹೇಗಿದೀನೋ ಹಾಗೇ ಇರ್ತೀನಿ. ಇದನ್ನೆಲ್ಲ ನಿಮ್ಮ ಹೆಂಡತಿಗೆ ಹೇಳಿ"

"ಏನಂದೆ?" ನಕ್ಕ. "ನೀನೇ ನನ್ನ ಹೆಂಡತಿ ಕಣೇ. ನಿನ್ನ ಹಿಂದೆ ಮುಂದೆ ಸುತ್ತುತ್ತಿದ್ದರೂ ನಿನಗೆ ತಿಳೀಲಿಲ್ವಾ ಪೆದ್ದೀ"

"ನಾನು ಪೆದ್ದಿಯಲ್ಲ. ನೀವು ಬಾಂಬೆಲಿದ್ದಾಗ ನನ್ನನ್ನ ಮರತೇ ಬಿಟ್ಟಿದ್ರಲ್ಲ. ಈಗಲೂ ಅಷ್ಟೇ... ನನ್ನನ್ನ ಮರತೇ ಬಿಡ್ತೀರಿ"

"ಅದಕ್ಕೆ ಆದಷ್ಟು ಬೇಗ ಮದುವೆಯಾಗಿ ಬಿಡೋಣ. ಕೆಲಸ ಸಿಗಲಿ ಅಂತ ಕಾಯ್ತಿದ್ದೆ. ಅಲ್ಲಿ ನನಗೆ ಕ್ವಾರ್ಟ್ರಸ್ ಕೊಡ್ತಾರೆ"

"ನಾವು ಅನುಕೂಲಸ್ಥರಲ್ಲ. ನಿಮ್ಮ ಅಮ್ಮನಿಗೆ ಸರಿ ಹೋಗುತ್ತಾ?"

"ಅಮ್ಮನ ಚಿಂತೆ ನಿನಗ್ಯಾಕೆ? ಒಂದು ಕಾಲದಲ್ಲಿ ನಿಮ್ಮ ಅಮ್ಮ ನಮ್ಮ ಅಮ್ಮ ಆಪ್ತ ಸ್ನೇಹಿತೆಯರಾಗಿದ್ದರು. ಸಮಯ ಅಂದ್ರೆ, ನಿಮ್ಮಮ್ಮ ನಮ್ಮ ಮನೆಗೆ ಬಂದು ಅಮ್ಮನಿಗೆ ಸಹಾಯ ಮಾಡುತ್ತಿದ್ದರು" ಅವಳ ಮುಖ ಮಂಕಾಯಿತು.

"ನಾವು ಈಗಲೂ ಅದೇ ಸ್ಥಿತಿಯಲ್ಲಿದೀವಿ. ನಿಮ್ಮಮ್ಮ ನನ್ನನ್ನು ಸೊಸೆ ಅಂತ ಒಪ್ಕೋತಾರಾ?"

"ಹೀಗ್ಯಾಕೆ ಕೇಳ್ತಿ ಹೇಮಾ? ನಿನಗೆ ನನ್ನ ಮೇಲೆ ಪ್ರೀತಿ ಇಲ್ವಾ? ಅಥವಾ ನೀನು ಬೇರೆ ಯಾರನ್ನಾದ್ರೂ ಪ್ರೀತಿಸ್ತಾ ಇದೀಯೋ?"

"ನಾನು ಯಾರನ್ನು ಪ್ರೀತಿಸ್ತಿಲ್ಲ ನನಗೆ ಅವೆಲ್ಲಾ ಗೊತ್ತಿಲ್ಲ"

"ಅಬ್ಬಾ.. ನೀನಿನ್ನು ಶುದ್ಧವಾಗಿದೀಯ ಅಂತ ಅರ್ಥವಾಯಿತು"

"ಹಾಗಂದ್ರೇ""

"ಅದನ್ನ ನಮ್ಮಿಬ್ಬರ ಮದುವೆ ಆದ ಮೇಲೆ ಹೇಳ್ತೀನಿ.. ನಮ್ಮ ಅತ್ತಿಗೆಗೆ ಡೆಲಿವರಿ ಆಗೋಕೆ ಇನ್ನು ಆರು ತಿಂಗಳು ಸಮಯವಿದೆ. ಅಷ್ಟರೊಳಗೆ ಮದುವೆಯಾಗೋಣ. ಆಮೇಲೆ ಅತ್ತಿಗೆ ಬಾಣಂತನಕ್ಕೆ ತವರು ಮನೆಗೆ ಹೋಗ್ತಾರೆ. ಹೇಮಾ ಸುಮ್ಮನಿದ್ದು ಬಿಟ್ಟಳು. ಸುರೇಶ ಸಮ್ಮತಿ ಎಂದು ಭಾವಿಸಿದ.

* * * * *

"ಅಮ್ಮಾ ತನ್ನನ್ನು ಸೊಸೆಯಾಗಿ ಸ್ವೀಕರಿಸುತ್ತಾಳೋ ಇಲ್ಲವೋ ಅಂತ ಅನುಮಾನ ಹೇಮಂಗೆ. ಅಮ್ಮ ಒಪ್ಪದಿದ್ದರೇ?" ಸುರೇಶ ತನ್ನ ಸಂಶಯವನ್ನು ವ್ಯಕ್ತ ಪಡಿಸಿದ.

"ನಾನು ನಿಮ್ಮ ತಾಯಿಯ ಹತ್ತಿರ ಮಾತಾಡ್ತೀನಿ. ಅವರು ಮೊದಲಿನಿಂದ ಹೇಮಾಳನ್ನು ಬಲ್ಲವರು. ಅವಳ ಬಗ್ಗೆ ಅನುಕಂಪವಿದೆ. ಆದರೆ ಅವಳು ಅಂದುಕೊಂಡಂತೆ ನಡೆಯಲಿಲ್ಲ. ಹೇಮಾಳ ಪ್ರಸ್ತಾಪ ಬಂದಾಗ ಗಿರಿಜಮ್ಮ ಒಪ್ಪಲಿಲ್ಲ.

"ಸಾವಿತ್ರಿ ನನ್ನ ಸ್ನೇಹಿತೆ ನಿಜ. ಆದರೆ ಸಂಬಂಧ ಬೆಳೆಸುವುದು ಸಾಧ್ಯವಿಲ್ಲ. ಸಾವಿತ್ರಿಯ ಗಂಡ ಕುಡುಕನಾಗಿದ್ದ, ಸಾಲಗಾರನಾಗಿದ್ದ. ನಾನೇ ಎಷ್ಟೋ ಸಾರಿ ಅವಳಿಗೆ ಧನಸಹಾಯ ಮಾಡಿದೀನಿ. ಆ ಹುಡುಗಿಯೇ, ಬೆಳೆದು ನಿಂತಿದ್ದರೂ ಕೊಳಕು ಕೊಳಕಾಗಿ ಇರುತ್ತಿದ್ದಳು. ಮಾರುದ್ದ ಕೂದಲು, ತಲೆ ತುಂಬಾ ಹೇನು, ಅವಳು ಮಗಳನ್ನು ಸರಿಯಾಗಿ ಬೆಳೆಸಿರಲಿಲ್ಲ. ನನಗೆ ಈ ಸಂಬಂಧ ಇಷ್ಟವಿಲ್ಲ"

ಸುಶೀಲಳ ಮುಖ ಪೆಚ್ಚಾಯಿತು. ತನ್ನ ಗಂಡನೊಡನೆ ಮಾತನಾಡಿದಳು. "ಈಗ ಏನು ಮಾಡೋದು? ಸುರೇಶ ಬೇರೆ ಹುಡುಗಿಯನ್ನು ಮದುವೆಯಾಗೊಲ್ಲ. ಅವಳಿಗೆ ಮಾತು ಕೊಟ್ಟು ಬಿಟ್ಟಿದ್ದಾನಂತೆ"

"ಅಮ್ಮಂಗೆ ಇಷ್ಟವಿಲ್ಲದಿದ್ದರೆ ಹೇಗೆ ನಡೆಯುತ್ತೆ ಈ ಮದುವೆ?"

"ಅಮ್ಮಂಗೆ ತಿಳಿಯದಂತೆ ಮದುವೆ ನಡೆದು ಹೋಗಲಿ. ಆಮೇಲೆ ಅಮ್ಮ ಒಪ್ಪಿಕೊಳ್ಳಲೇ ಬೇಕಾಗುತ್ತದೆ"

ಭಾರ್ಗವ ಈ ನಿರ್ಧಾರಕ್ಕೆ ಒಪ್ಪಿಕೊಳ್ಳಲೇ ಬೇಕಾಯ್ತು. ಒಂದು ದಿನ ಗಂಡ ಹೆಂಡತಿ ಇಬ್ಬರೂ, ಹೂವು ಹಣ್ಣುಗಳನ್ನು ಹಿಡಿದು ಹೇಮಾಳ ಮನೆಗೆ ಬಂದರು.

"ನಾನು ಭಾರ್ಗವ, ಗಿರಿಜಮ್ಮನ ಮಗ. ಇವಳು ನನ್ನ ಹೆಂಡತಿ ಸುಶೀಲಾ ಇಬ್ಬರೂ ತಮ್ಮನ್ನು ಪರಿಚಯಿಸಿಕೊಂಡು ಒಳಬಂದರು. ಸಾವಿತ್ರಿ ಒಳಗೆ ಕೂರಿಸಿದಳು. ಸುಶೀಲಳೇ ಮಾತನಾಡಿದಳು.

"ಸುರೇಶ ಹೇಮಾಳನ್ನು ಇಷ್ಟ ಪಟ್ಟಿದ್ದಾನೆ. ಅವರಿಬ್ಬರ ಮದುವೆಗೆ ನಿಮ್ಮ ಒಪ್ಪಿಗೆ ಬೇಕು."

"ಗಿರಿಜಾ, ನನ್ನ ಮಗಳನ್ನು ಸೊಸೆ ಅಂತ ಒಪ್ಪಿಕೊಳ್ಳೊಲ್ಲ, ನಂಗೊತ್ತು"

"ಅವರಿಗೆ ಈಗಲೇ ತಿಳಿಸುವುದು ಬೇಡ. ಮೊದಲು ಮದುವೆ ನಡೆದು ಹೋಗಲಿ. ಆಮೇಲೆ ಅವಳು ಒಪ್ಪಿಕೊಳ್ಳಲೇ ಬೇಕಾಗುತ್ತೆ" ಭಾರ್ಗವನೆಂದ.

"ಇಲ್ಲಪ್ಪಾ... ಇದು ಸರಿಯಿಲ್ಲ. ಗಿರಿಜಂಗೆ ಒಪ್ಪಿಗೆ ಇಲ್ಲದಿದ್ದರೆ ಹೇಮಾಳ ಬಾಳು ನರಕ ಆಗುತ್ತೆ. ಆ ಮನೇಲಿ ಅವಳು ಹೇಗೆ ಇರ್ತಾಳೆ?"

"ಅವಳು ಇಲ್ಲಿಯೇ ಇರಬೇಕಾಗಿಲ್ಲ. ಮಂಡ್ಯದಲ್ಲಿ ಅವರ ಪಾಡಿಗೆ ಅವರು ಇರ್ತಾರೆ. ಕ್ರಮೇಣ ಎಲ್ಲಾ ಸರಿ ಹೋಗುತ್ತೆ"

"ಇಲ್ಲಪ್ಪಾ... ನಿಮ್ಮ ಅಮ್ಮನನ್ನು ನಾನು ನಿನಗಿಂತ ಮುಂಚಿನಿಂದ ಬಲ್ಲೆ. ಒಂದು ಕಾಲದಲ್ಲಿ ನಾವು ಆತ್ಮೀಯರಾಗಿದ್ದೆವು ನಿಜ. ಆದರೆ ಬಡತನ ಕೆಟ್ಟದ್ದು. ಅಲ್ಲಿ ಸ್ನೇಹಕ್ಕೂ ಬಡತನವೇ. ಅಲ್ಲಿ ಬಡವರಿಗೆ ಸಿಗುವುದು ಬರೀ ಅವಮಾನವೇ"

"ಅಂಥಾದೇನಾಯ್ತೋ ಗೊತ್ತಿಲ್ಲ. ಹಿಂದೆಲ್ಲಾ ನೀವು ನಮ್ಮ ಮನೆಗೆ ಬರ್ತಿದ್ರಿ. ನಮಗೆಲ್ಲಾ ಎಷ್ಟು ಒಳ್ಳೊಳ್ಳೆಯ ತಿಂಡಿಗಳನ್ನು ಮಾಡಿ ಕೊಡ್ತಿದ್ರಿ"

"ಅದೆಲ್ಲಾ ಈಗ್ಯಾಕೆ ಬಿಡಪ್ಪಾ. ಆ ಸ್ನೇಹ ಮತ್ತೆ ಹಿಂತಿರುಗಿ ಬರುವುದಿಲ್ಲ"

"ಅಮ್ಮಾ, ನೀವು ಬದುಕಿಲ್ಲ ಅಂತ ತಿಳಿದಿದಾಳೆ. ನಿಮ್ಮನ್ನು ಜೀವಂತವಾಗಿ ಕಂಡರೆ ಖಂಡಿತಾ ಸಂತೋಷ ಪಡ್ತಾಳೆ"

"ಇಲ್ಲ, ನಾನು ಅವಳ ಪಾಲಿಗೆ ಸತ್ತು ಹೋಗಿದೀನಿ. ಇದು ಹೀಗೇ ಇರಲಿ. ನನಗೂ ಈ ಮದುವೆ ನಡೆಯುವುದು ಇಷ್ಟವಿಲ್ಲ" ಅವಳು ಖಡಾ ಖಂಡಿತವಾಗಿ ಹೇಳಿದಾಗ ಇಬ್ಬರೂ ಎದ್ದರು.

"ಬಸುರಿ ಹುಡುಗಿ, ಬಂದಿದೀಯ, ಕೂತ್ಕೋ" ಎಂದು ಹೇಳಿ ಕಾಫಿಯನ್ನು ಕರಿದ ತಿಂಡಿಗಳನ್ನು ಕೊಟ್ಟು, ಎಲೆ ಅಡಿಕೆ ಹಣ್ಣುಗಳೊಂದಿಗೆ ಹಸಿರು ರವಿಕೆ ಖಣವನ್ನು ಇಟ್ಟು ಕೊಟ್ಟಳು. "ಗಂಡು ಮಗುವಿನ ತಾಯಿಯಾಗು" ಅಂತ ಹರಸಿದಳು. ಇಬ್ಬರೂ ನಿರಾಸೆಯ ಮುಖವನ್ನು ಹೊತ್ತು ಹೊರಬಂದರು.

* * * * *

"ಅಮ್ಮಾ, ಸುರೇಶನ ಅತ್ತಿಗೆ, ಅಣ್ಣ ಯಾಕೆ ಬಂದಿದ್ರು?"

"ನಿನ್ನನ್ನ ಮನೆ ತುಂಬಿಸಿಕೊಳ್ಳೋಕೆ, ನನಗೆ ಇಷ್ಟವಿಲ್ಲ ಅಂತ ಹೇಳಿ ಬಿಟ್ಟೆ"

"ಯಾಕಮ್ಮಾ ಹಾಗೆ ಹೇಳಿದೆ. ಸುರೇಶ ನನ್ನನ್ನು ಮೆಚ್ಚಿದಾನೆ. ಅವನ ಅಣ್ಣ ಅತ್ತಿಗೆಗೂ ಒಪ್ಪಿಗೆ ಅಂತೆ"

"ಗಿರಿಜಂಗೆ ಒಪ್ಪಿಗೆ ಇಲ್ಲ. ಆದ್ದರಿಂದ ನಂಗೂ ಒಪ್ಪಿಗೆ ಇಲ್ಲ"

"ನಮ್ಮಿಬ್ಬರ ಪ್ರೀತಿಗೆ ನೀವು ಇಬ್ಬರೇ ಕಾರಣ. ಈಗ ಬೇಡ ಅಂತೀಯಲ್ಲ"

"ಅದು ಯಾವುದೋ ಜನ್ಮದ್ದು, ಈಗ ನಮ್ಮಿಬ್ಬರ ನಡುವೆ ಸ್ನೇಹ ಇಲ್ಲ. ಸಾವಿತ್ರಿ ಹಂಗಿಸಿ ಸಾಕಷ್ಟು ಅಂದಿದಾಳೆ. ಕೀಳಾಗಿ ಕಂಡಿದಾಳೆ. ಅವಳ ಮನೆಯ ಸೊಸೆಯಾಗಿ ನೀನು ಹೋಗುವುದು ನನಗಿಷ್ಟವಿಲ್ಲ. ನೀನು ಅವನನ್ನು ಮರೆತು ಬಿಡು" ಹೇಮಾ ಪೆಚ್ಚಾದಳು. ಆದರೆ ನಡೆದದ್ದೇ ಬೇರೆ. ಭಾರ್ಗವ, ಸುಶೀಲ,

ಸುರೇಶ, ಹೇಮಾ ಒಂದಾದರು. ಗುಟ್ಟಾಗಿ, ಮದುವೆಯ ತಯಾರಿಯನ್ನು ನಡೆಸಿದರು. ಸಮೀಪದ ದೇವಸ್ಥಾನ ಒಂದರಲ್ಲಿ ದೇವರ ಸಮ್ಮುಖದಲ್ಲಿ, ಭಾರ್ಗವ ಸುಶೀಲರ ಸಾಕ್ಷಿಯಲ್ಲಿ. ಅವರ ಸಹಕಾರದೊಂದಿಗೆ, ಹೇಮಾ ಸುರೇಶರ ಮದುವೆ ನೆರವೇರಿತು.

ಅರ್ಚಕರು ಮಂಗಳಾರತಿಯ ನಂತರ ತೀರ್ಥ ಪ್ರಸಾದಗಳನ್ನು ಕೊಟ್ಟು, ನವವಧೂವರರನ್ನು ಆಶೀರ್ವದಿಸಿದರು. ಅಲ್ಲಿಂದ ನಾಲ್ಕು ಜನವೂ ಟ್ಯಾಕ್ಸಿಯಲ್ಲಿ ಮನೆಗೆ ಬಂದರು. ಟ್ಯಾಕ್ಸಿ ನಿಂತ ಸದ್ದು ಕೇಳಿ ಗಿರಿಜಮ್ಮ ಮುಂಬಾಗಿಲಿಗೆ ಬಂದಳು. ಭಾರ್ಗವ ಸುಶೀಲ ಟ್ಯಾಕ್ಸಿಯಿಂದ ಇಳಿದು ಹೊರ ಬಂದರು.

"ಎಲ್ಲಿಗೆ ಹೋಗಿದ್ರೋ ಇಬ್ಬರೂ. ಸುಶೀಲ ಹುಶಾರಾಗಿದಾಳೆ ತಾನೇ. ಸುರೇಶನೂ ಮನೇಲಿಲ್ಲ. ಎಲ್ಲಿಗೆ ಹೋದ್ನೋ"

"ಅವನೂ ನಮ್ಮ ಜತೆಯಲ್ಲಿ ಬಂದಿದ್ನಮ್ಮ"

"ಅವನಿಗೆ ಏನಾಯ್ತು?" ಗಾಬರಿಯಿಂದ ಕೇಳಿದಳು.

"ಅವನ ಮದುವೆ ಮುಗಿಸಿಕೊಂಡು ಬರ್ತಾ ಇದೀನಿ. ಅವರಿಬ್ಬರಿಗೂ, ನಿನಗೆ ಮನಸ್ಸಿದ್ದರೆ ಆಶೀರ್ವಾದ ಮಾಡು" ಗಿರಿಜಮ್ಮ ಬಗ್ಗಿ ನೋಡಿದಳು. ಹೊಸ ಬಟ್ಟೆಯನ್ನು ಧರಿಸಿ, ಹೂವಿನ ಹಾರಗಳನ್ನು ಹಾಕಿಕೊಂಡು ನವದಂಪತಿಗಳು ಟ್ಯಾಕ್ಸಿಯಿಂದ ಇಳಿದು ನಿಂತಿದ್ದರು. ಅವಳ ಮುಖ ಕಪ್ಪಿಟ್ಟಿತು.

"ಏನು? ಸುರೇಶ ಮದುವೆ ಆದ್ನಾ?.. ಹುಡುಗಿ.. ಯಾರು?"

"ಹೇಮಾ... ಸಾವಿತ್ರಿ ಆಂಟಿಯ ಮಗಳು"

"ಹೀಗ್ಯಾಕೆ ಮಾಡಿದ್ರೋ, ನಾನು ಪರಕೀಯಳಾಗಿ ಬಿಟ್ನಾ?... ಸಾವಿತ್ರಿಯ ಮಗಳೇ ಹೆಚ್ಚಾದ್ಲಾ ನಿಮಗೆ?" ಸಿಟ್ಟು ತಡೆಯದಾಗಿ ಅಳು ಬಂದಿತ್ತು.

"ಈಗ ಅಳುವ ಸಮಯವಲ್ಲ ಇಬ್ಬರನ್ನು ಆಶೀರ್ವದಿಸಿ, ಒಳಕ್ಕೆ ಬರಮಾಡಿಕೊಳ್ಳುವ ಹೊತ್ತು. ಇಲ್ಲದಿದ್ದರೆ ಸುರೇಶ ನಮ್ಮಿಂದ ದೂರ ಹೊರಟು ಹೋಗ್ತಾನೆ"

"ಏನಮ್ಮ ಸುಶೀಲಾ... ನೀನು ಇದರಲ್ಲಿ ಶಾಮೀಲಾ... ಮನೇಲಿ ನೀನೊಬ್ಬಳಾದ್ರೂ ನನ್ನ ಹಿರಿತನಕ್ಕೆ ಬೆಲೆ ಕೊಡಬೇಕಾಗಿತ್ತು ಅಲ್ವಾ?"

"ನಿಮ್ಮ ಒಪ್ಪಿಗೆಯನ್ನು ಕೇಳಿದ್ದೆನಲ್ಲಮ್ಮ. ಇವರಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ನೀವೂ. ಸಾವಿತ್ರಿ ಆಂಟಿ, ಇಬ್ಬರೂ ಒಪ್ಪಿದ್ದರೆ ಮದುವೆ ವಿಜೃಂಭಣೆಯಿಂದ ನಡೆಯುತ್ತಿತ್ತು. ಈಗಲೂ ನಿಮಗೆ ಸಮಾಧಾನವಿದ್ದರೆ ರಿಸೆಪ್ಷನ್ ಇಟ್ಟುಕೊಳ್ಳೋಣ"

"ಸಾವಿತ್ರಿ ಸತ್ತರೂ, ನನಗೆ ಒಳ್ಳೆದನ್ನ ಮಾಡಲಿಲ್ಲ"

ಅವರು ಸತ್ತಿಲ್ಲಮ್ಮ ಬದುಕಿದ್ದಾರೆ. ಆದರೆ, ನಾವಿಬ್ಬರು ಮುಂದಾಗಿ ನಿಂತು ಇವರಿಬ್ಬರ ಮದುವೆ ನೆರವೇರಿಸಿದೀನಿ. ಸಾವಿತ್ರಿ ಆಂಟಿಗೂ ಈ ವಿಷಯ ಗೊತ್ತಿಲ್ಲ.

ಹೇಮಾ ತಾಯಿಯ ಮನೆಯನ್ನು ಬಿಟ್ಟು ಬಂದಿದಾಳೆ. ಈಗ ನೀನೇ ಅವಳಿಗೆ ತಾಯಿ.

ಈ ನಾಟಕದ ಮಾತುಗಳೆಲ್ಲ ಬೇಡ. ಅಂತೂ ನನ್ನ ಹಿಂದೆ ಪರದೆ ಬೀಳಿಸಿ ನಾಟಕವನ್ನು ರಚಿಸಿದೀರಿ. ನಾನು ಸಾವಿತ್ರಿಯಷ್ಟು ದುರಹಂಕಾರದವಳಲ್ಲ. ಆದರೂ ನನ್ನ ಮನಸ್ಸು ಒಡಂಬಡುತ್ತಿಲ್ಲ. ಇಬ್ಬರಿಗೂ ಒಳಗೆ ಬನ್ನಿ ಅಂತ ಹೇಳು. ಬೀದಿಯಲ್ಲಿ ನಿಂತಿರುವುದು ಬೇಡ. ಅಕ್ಕ ಪಕ್ಕದವರು ನೋಡ್ತಿದಾರೆ. ಅಷ್ಟು ಹೇಳಿ ಒಳಗಿನ ರೂಮಿಗೆ ಹೊರಟು ಹೋದಳು. ಹೇಮಾ ಬಲಗಾಲನ್ನಿಟ್ಟು ಒಳಗೆ ಬಂದಳು. ಸುಶೀಲಳೇ ಇಬ್ಬರನ್ನು ಆದರಿಸಿದಳು. "ಇಬ್ಬರೂ ದೇವರ ಮನೆಗೆ ಹೋಗಿ ದೇವರಿಗೆ ನಮಸ್ಕಾರ ಮಾಡಿ ಬನ್ನಿ"

ದೇವರಿಗೆ ನಮಸ್ಕಾರ ಮಾಡಿದ ನಂತರ, ಇಬ್ಬರೂ ಗಿರಿಜಮ್ಮ ಇದ್ದ ರೂಮಿಗೆ ಬಂದರು. ಸುರೇಶ ತಾಯಿಗೆ ನಮಸ್ಕರಿಸಿದ. ನಿನಗೆ ಬೇಸರವಾಗಿದೆ ಅಂತ ನನಗೆ ಗೊತ್ತು. ಆದರೆ, ಪ್ರೀತಿಸಿದವರು ಮದುವೆ ಆದರೆ ಅದು ತಪ್ಪೇನಮ್ಮಾ?"

"ಈಗ ನನಗೆ ಏನೂ ಹೇಳಬೇಡ. ನನ್ನನ್ನು ಏನೂ ಕೇಳಬೇಡ. ನನ್ನ ಮಾತಿಗೆ ನೀವುಗಳು ಗೌರವ ಕೊಡಲಿಲ್ಲ. ಇನ್ನು ನನಗೇನು ಉಳಿದಿದೆ. ನನ್ನ ಪಾಡಿಗೆ ನನ್ನನ್ನು ಬಿಡು. ನೀವುಗಳು ಸುಖವಾಗಿರಿ" ಎತ್ತಲೋ ನೋಡುತ್ತಾ ನುಡಿದಳು.

"ಹೇಮಾ ಅಮ್ಮಂಗೆ ನಮಸ್ಕಾರ ಮಾಡು"

ಹೇಮಾ ನಮಸ್ಕರಿಸಿದಳು. ಗಿರಿಜಮ್ಮ ಮೌನವಾಗಿದ್ದಳು. ಇಬ್ಬರೂ ಹೊರ ಬಂದರು. ಸುಶೀಲ ಅಡಿಗೆಯ ತಯಾರಿಯಲ್ಲಿದ್ದಳು.

"ಅತ್ತಿಗೆ ಒಬ್ಬರೇ ಅಡಿಗೆ ಮಾಡ್ತಿದಾರೆ. ನೀನೂ ಸಹಾಯ ಮಾಡು. ಅವರಿಗೆ ಖುಷಿ ಆಗುತ್ತೆ. ಅವರು ಈಗ ಹೆಚ್ಚು ಕೆಲಸ ಮಾಡುವಂತಿಲ್ಲ" ಅವಳು ಮರು ಮಾತಾಡದೇ ಅಡಿಗೆ ಮನೆಯ ಕಡೆಗೆ ನಡೆದಳು. ಗಿರಿಜಮ್ಮ ಮುನಿಸು ಕಡಿಮೆಯಾಗಿಲ್ಲದಿದ್ದರೂ ಏನೂ ಮಾತಾಡಲಿಲ್ಲ.

* * * * *

ಆ ರಾತ್ರಿ, ಕೇಸರಿ ಬಾದಾಮಿಯನ್ನು ಸಕ್ಕರೆಯನ್ನು ಹಾಕಿ, ಹದವಾಗಿ ಬಿಸಿ ಮಾಡಿದ್ದ ಹಾಲನ್ನು ಎರಡು ಬೆಳ್ಳಿಯ ಲೋಟಗಳಿಗೆ ಹಾಕಿ ಹೇಮಾಳಿಗೆ ಕೊಟ್ಟು, ಸುಶೀಲ ನುಡಿದಳು.

ಇದು ನಿಮ್ಮಿಬ್ಬರ ಮೊದಲ ರಾತ್ರಿ. ನಿಮ್ಮಿಬ್ಬರಿಗೂ ಶುಭವಾಗಲಿ. ಸುರೇಶನ ಮನಸ್ಸು ಸ್ವಲ್ಪ ಪೆಚ್ಚಾಗಿದೆ. ಅದನ್ನು ನೀನು ಮುದದಿಂದ ಸರಿ ಮಾಡಬೇಕು. ಅವನು ನಿನ್ನನ್ನು ತುಂಬಾ ಪ್ರೀತಿಸ್ತಾನೆ. ನೀನು ಅವನನ್ನು ಅನುಸರಿಸಿಕೊಂಡು ಹೋದರೆ ಸಾಕು. ಉಳಿದವರ ಬಗ್ಗೆ ತಲೆ ಕೆಡಿಸಿಕೊಳ್ಳಬೇಡ. ಹೇಮಾ ಕಣ್ಣಿನಲ್ಲೇ ಥ್ಯಾಂಕ್ಸ್ ಹೇಳಿ ಕೃತಜ್ಞತೆಯಿಂದ ನೋಡಿದಳು. ಸುಶೀಲಾ, ಹೋಗು ಎನ್ನುವಂತೆ ಸಂಜ್ಞೆ ಮಾಡಿದಳು.

ಬಾಗಿಲ ಬಳಿ ನಿಂತಿದ್ದ ಹೇಮಾಳನ್ನು ಸುರೇಶ ಕೈ ಹಿಡಿದು ಒಳಗೆ ಕರೆ ತಂದು ಮಂಚದ ಮೇಲೆ ಕೂರಿಸಿದ. ಹಾಲಿನ ಲೋಟಗಳನ್ನು ಪಕ್ಕದ ಟೀಪಾಯ್ ಮೇಲೆ ಇಟ್ಟ.

ಇದು ನಮ್ಮ ಪ್ರಥಮ ರಾತ್ರಿ. ಆದರೆ ನೋಡು, ಯಾವ ಉತ್ಸಾಹವಿಲ್ಲ, ಸಂಭ್ರಮವಿಲ್ಲ. ನಮ್ಮಮ್ಮ, ನಿಮ್ಮಮ್ಮ ಇಬ್ಬರೂ ಮುನಿಸಿಕೊಂಡಿದಾರೆ. ನೀನು ಬರೆದಿಟ್ಟಿರುವ ಪತ್ರವನ್ನು ಓದಿ, ನಿಮ್ಮಮ್ಮ ಅಳುತ್ತಿರಬಹುದು. ಈ ಮೋಡ ಮುಸುಕಿರುವ ವಾತಾವರಣದ ಮಧ್ಯೆ ನಾವಿಬ್ಬರೂ ಕೆಲವು ದಿನಗಳ ಮಟ್ಟಿಗೆ ದೂರ ದೂರ ಇರುವುದೇ ಸರಿ ಅಂತ ಅನ್ನಿಸ್ತಿದೆ. ನಿನಗೆ ಬೇಸರವಾಗಬಹುದು. ನನ್ನನ್ನು ಕ್ಷಮಿಸು.

"ಹಾಗೇನಿಲ್ಲ, ನನಗೂ ನಿಮ್ಮ ಮನಸ್ಸು ಅರ್ಥವಾಗುತ್ತೆ"

"ಅತ್ತಿಗೆ ಏನಾದ್ರು ಕೇಳಿದ್ರೆ ಸುಮ್ಮನೆ ನಕ್ಕು ಬಿಡು. ಅವರು ಒಳ್ಳೆಯವರು.. ಅಮ್ಮನೂ ಒಳ್ಳೆಯವಳೇ. ಆದರೆ ಬದಲಾಗಲು ಕೆಲವು ಸಮಯ ಹಿಡಿಸುತ್ತದೆ ಅಷ್ಟೆ. ಅವಳನ್ನು ನೀನು ಆದಷ್ಟು ಬೇಗ ಗೆಲ್ಲಬೇಕು. ನಿನಗೆ ಇದು ಒಂಥರಾ ಪರೀಕ್ಷೆ"

ಹೇಮಾ ಮಾತಾಡಲಿಲ್ಲ. ಅವನು ಅವಳ ಕೈಗೆ ಹಾಲಿನ ಲೋಟವನ್ನು ಕೊಟ್ಟು, ತಾನೂ ಕುಡಿದ. "ಹಾಲು ತುಂಬಾ ಸವಿಯಾಗಿತ್ತು. ಹಾಗೆಯೇ ನಮ್ಮಿಬ್ಬರ ಸ್ನೇಹವೂ ಸವಿಯಾಗಿರಬೇಕು. ಗುಡ್ ನೈಟ್. ಇನ್ನು ಮಲಗೋಣ್ವಾ?" ದೀಪವನ್ನಾರಿಸಿದ.

"ಅಮ್ಮನನ್ನು ಒಲಿಸಿಕೊಳ್ಳುವುದು ಸುಲಭವಲ್ಲ. ಈಗ ತಾನು ಹಾಕಿಕೊಂಡಿರುವ ನಿಬಂಧನೆಯನ್ನು ತಾನು ಅನುಸರಿಸಲೇ ಬೇಕು" ಎಂದುಕೊಂಡ.

"ಅತ್ತೆ ತನ್ನನ್ನು ಸೊಸೆ ಎಂದು ಮನಃಪೂರ್ವಕವಾಗಿ ಸ್ವೀಕರಿಸುವವರೆಗೂ, ಇವನು ನನ್ನನ್ನು ಹೆಂಡತಿ ಅಂತ ಸ್ವೀಕರಿಸುವುದಿಲ್ಲ. ಅತ್ತೇನ ಹೇಗೆ ಒಲಿಸಿಕೊಳ್ಳಬೇಕು ಅಂತ ಅಕ್ಕನೇ ಹೇಳಬೇಕು" ಎಂದುಕೊಂಡು ನಿದ್ರಿಸಲು ಯತ್ನಿಸಿದಳು.

ಒಂದೆರಡು ದಿನಗಳ ನಂತರ ಸುರೇಶ ಮಂಡ್ಯಕ್ಕೆ ಹೊರಟು ಬಿಟ್ಟ. ನಾನು ಪ್ರತಿವಾರ ಬರ್ತೀನಿ. ಅತ್ತಿಗೆ ನಿನ್ನ ಕಡೆಗಿದಾರೆ. ನಿನಗೆ ಯಾವ ಆತಂಕವೂ ಬೇಡ ಎಂದು ಗಲ್ಲ ಹಿಡಿದು ಅಲ್ಲಾಡಿಸಿದ್ದ. ಆತಂಕ ಅವಳ ಕಣ್ಣುಗಳಲ್ಲಿ ತುಂಬಿತ್ತು. ಸುಶೀಲ ಅವಳನ್ನು ಅಡುಗೆ ಮನೆಗೆ ಎಳೆದುಕೊಂಡು ಹೋದಳು.

ಹೆಂಗಸರಿಗೆ ಅಡುಗೆ ಮನೆಯೇ ಸರ್ವಸ್ವ. ಇಲ್ಲಿರುವ ಉಪಕರಣಗಳೆಲ್ಲಾ ನಮ್ಮವೇ. ಇದರ ಪೂರ್ಣ ನಿರ್ವಹಣೆ ನಮಗೆ ಸೇರಿದ್ದು. ಇಲ್ಲಿ ನಾವು ಸ್ವತಂತ್ರರು. ನಮ್ಮದೇ ಸಾಮ್ರಾಜ್ಯ. ಇದು ಒಂದು ಕಲಾಮಂದಿರ. ಅಡುಗೆಯೂ ಒಂದು ಕಲೆಯೇ. ತರಕಾರಿಯನ್ನು ಹೆಚ್ಚುವುದಕ್ಕೂ ಕೈ ಚಳಕಬೇಕು. ಸೌಟನ್ನು ತಿರುಗಿಸುವುದಕ್ಕೂ ಒಂದು ಭಂಗಿ ಬೇಕು. ಈ ಸೌಟು, ಚಮಚಗಳೇ ಆಯುಧಗಳು. ಈ ಆಯುಧಗಳನ್ನು ಹುಶಾರಾಗಿ ಕಲಾವಂತಿಕೆಯಿಂದ ಬಳಸಬೇಕು. ಇದರಲ್ಲಿ ನಮ್ಮ ಜಾಣತನ ಅಡಗಿದೆ. ಸುಶೀಲ ನಗುತ್ತಾ ಹೇಳುತ್ತಿದುದನ್ನು ಹೇಮಾ ಗಮನವಿಟ್ಟು ಕೇಳಿಕೊಂಡಳು.

"ಇದು ಅಡುಗೆ ಮನೆಯ ಕತೆ. ನಿನ್ನೆ ರಾತ್ರಿ ಬೆಡ್‌ರೂಂನ ವಿಷಯ ಹೇಗಿತ್ತು?" ಹೇಮಾ ನಕ್ಕಳು. ಸುಮ್ಮನೆ ನಕ್ಕು ಬಿಡು ಅಂತ ನಿನ್ನ ಗಂಡ ಹೇಳಿ ಕೊಟ್ಟಿದಾನೆ. ಎರಡು ದಿನದಿಂದ ಅವನು ಇದ್ದ ಅಂತ ನಾನು ಏನನ್ನು ಕೇಳಿರಲಿಲ್ಲ.

"ಏನೂ ಇಲ್ಲ ಅಕ್ಕಾ... ಅವರು ಭಾನುವಾರ ಬರ್ತಾರಲ್ಲ ನೀವೇ ಕೇಳ್ಬಿಡಿ"

"ಅಂತಃಪುರದಲ್ಲಿ ಏನು ನಡೀತು ಅಂತ ನಾನು ಗಂಡು ಹುಡುಗನ್ನ ಕೇಳುಕ್ಕೆ ಆಗುತ್ತಾ! ನೀನೇ ಹೇಳು"

"ಹೇಳುವಂಥಾದ್ದು ಏನೂ ನಡೀಲಿಲ್ಲ ಅಕ್ಕಾ... ನಾವಿಬ್ಬರೂ ಹತ್ತಿರವಾಗಿಲ್ಲ"

"ಯಾಕೇ ಹೇಮಾ... ನಿಮ್ಮಿಬ್ಬರ ಮಧ್ಯೆ ಏನಾದ್ರೂ ಮನಸ್ತಾಪ..."

"ಅಮ್ಮ ನನ್ನನ್ನ ಸೊಸೆ ಅಂತ ಒಪ್ಪಿಕೊಂಡಿಲ್ಲ ಅಂತ ಅವರಿಗೆ ಬೇಜಾರು"

"ಸುರೇಶ ತಪ್ಪು ಮಾಡ್ದ. ಹೆಂಡ್ತಿ ಅಂದ್ರೆ ಏನೂಂತ ತಿಳಕೊಂಡಿದಾನೆ. ನಿಂಗೂ ಒಂದು ಮನಸ್ಸು, ಹೃದಯ ಇದೆ ಅಂತ ಗೊತ್ತಾಗಬೇಡ್ವಾ?" ಹೇಮಾ ಮೆಲ್ಲನೆ ಅತ್ತಳು.

"ನಾನು ನಿನ್ನ ಭಾವಂಗೆ ಹೇಳ್ತೀನಿ. ನೀನು ಮಂಡ್ಯಕ್ಕೆ ಹೋಗ್ಬಿಡು. ಅಲ್ಲಿ ನೀವಿಬ್ರೇ ಇರ್ತೀರಿ. ಗುದ್ದಾಡಿ, ಜಗಳವಾಡಿ ಯಾರೂ ಕೇಳೋರು ಇರೋಲ್ಲ"

"ಇಲ್ಲ ಅಕ್ಕಾ, ನಾನೂ ಒಂದು ತೀರ್ಮಾನಕ್ಕೆ ಬಂದಿದೀನಿ. ಅತ್ತೇನ ಒಲಿಸಿಕೊಳ್ಳುವ ಉಪಾಯ ಇದ್ದರೆ ತಿಳಿಸಿ, ನಾನು ಇಬ್ಬರನ್ನು ಗೆದ್ದಂತಾಗುತ್ತದೆ"

"ಸಧ್ಯದಲ್ಲೇ ನಾನು ಬಾಣಂತನಕ್ಕೆ ಅಂತ ತವರು ಮನೆಗೆ ಹೋಗ್ಬೇಕು. ಅದಕ್ಕೆ ಮುಂಚೆ ಸೀಮಂತ ಮಾಡ್ಬೇಕು. ನೀನು ಅದರ ಜವಾಬ್ದಾರಿ ತಗೋ. ಅತ್ತೆಗೆ ಶ್ರಮ ಕಡಿಮೆ ಆಗುತ್ತೆ. ಆಗ ಅವರು ನಿನ್ನನ್ನು ಮೆಚ್ಚಲೇ ಬೇಕು"

"ನಿಮ್ಮ ಸಹಕಾರ ಇದ್ದರೆ, ಎಲ್ಲಾ ನಿರ್ವಹಿಸ್ತೀನಿ" ದೃಢವಾಗಿ ಹೇಳಿದಳು.

"ಅತ್ತೆ ಕೆಟ್ಟವರಲ್ಲ, ಅವರ ಮನಸ್ನಲ್ಲಿ ಏನೋ ಇದೆ. ನಿಮ್ಮಮ್ಮ ಒಂದು ಸಾರಿ ಬಂದು ಹೋದರೆ ಎಲ್ಲಾ ಸರಿ ಹೋಗುತ್ತೆ"

"ಅಮ್ಮ ತುಂಬಾ ಸ್ವಾಭಿಮಾನಿ. ಬರ್ತಾಳೋ ಇಲ್ಲವೋ?"

"ನನ್ನ ಸೀಮಂತಕ್ಕೆ ನೀನೇ ಕರೆದು ಬಾ. ಅವರು ಖಂಡಿತಾ ಬರ್ತಾರೆ. ಮೊದಲು ಅತ್ತೆಯ ಮನಸ್ಸನ್ನು ಒಲಿಸ್ಕೋ"

* * * * *

"ಅತ್ತೇ ಊಟಕ್ಕೆ ಬನ್ನಿ ತಟ್ಟೆ ಹಾಕಿದೀನಿ" ಹೇಮಾ ರೂಮಿನ ಬಾಗಿಲಲ್ಲಿ ನಿಂತು ಹೇಳಿದಳು.

"ಸುಶೀಲಾ ಎಲ್ಲಿ ಕರಿ ಅವಳನ್ನ.."

"ಅವರು ಸೊಂಟ ನೋಯ್ತಿದೆ ಅಂತ ಮಲಗಿದಾರೆ"

"ಹೌದಾ?" ಎನ್ನುತ್ತಾ ಗಿರಿಜಮ್ಮ ಸುಶೀಲಳನ್ನು ನೋಡಲೆಂದು ಬಂದಳು.

"ಯಾಕೇ ಸುಶೀಲಾ...ನೀನು ವಿಪರೀತ ಆಯಾಸ ಮಾಡ್ಕೋತೀಯಾ. ಇನ್ನಾದ್ರೂ ಸ್ವಲ್ಪ ಕೆಲಸ ಕಮ್ಮಿ ಮಾಡ್ಕೋಬಾರ್ದಾ. ಬಾ... ಎಣ್ಣೆ ನೀವಿ ಬಿಸಿ ಬಿಸಿ ನೀರಿನ ಸ್ನಾನ ಮಾಡಿಸ್ತೀನಿ"

"ಹೇಮಾ ಸೊಂಟವನ್ನು ನೀವಿದಾಳೆ. ಬಿಸಿ ನೀರಿನ ಶಾಖವನ್ನು ಕೊಟ್ಟಿದಾಳೆ. ಈಗ ಸ್ವಲ್ಪ ಹಿತವಾಗಿದೆ"

"ನಿಂದು ಊಟ ಆಯ್ತು?"

"ಇಲ್ಲ ಅತ್ತೆ, ನೀವು ಬರಲಿ ಅಂತ ಕಾಯ್ತಾ ಇದ್ದೆವು"

"ಏನು ನೋಡ್ತಾ ಇದೀಯ? ಊಟಾನ ಕಲಿಸ್ಕೊಂಡು ಬಾ. ಇವಳು ಎದ್ದು ಬರೋದು ಬೇಡ. ಇಲ್ಲೇ ತಿನ್ನಲಿ. ನೀನು ಇವಳ ಜೊತೇನೇ ಇರು" ಹೇಮಾ ಅಡುಗೆ ಮನೆಯ ಕಡೆ ನಡೆದಾಗ, ಸುಶೀಲ ಅತ್ತೆಯ ಕೈ ಹಿಡಿದಳು.

"ಅತ್ತೇ ನೀವು ತುಂಬಾ ಒಳ್ಳೆಯವರು. ನನ್ನನ್ನ ಮಗಳಂತೆ ನೋಡಿ ಕೊಳ್ತಿದೀರಿ. ಆ ಸಲುಗೆಯಿಂದ ಒಂದು ಮಾತು ಕೇಳ್ಲಾ?"

"ಹೂಂ, ಕೇಳು"

"ನೀವು ಹೇಮಂಗೂ ಮಗಳ ಸ್ಥಾನ ಕೊಡಿ. ಅವಳು ತಾಯಿಯನ್ನು ಬಿಟ್ಟು ಬಂದಿದಾಳೆ"

"ಅಮ್ಮನ್ನ ಬಿಟ್ಟು ಬಾ ಅಂತ ನಾನೇನೂ ಹೇಳಿರ್ಲಿಲ್ಲ"

"ನಿಮ್ಮ ಮಗನಿಗೋಸ್ಕರ ಬಂದಿದಾಳೆ. ಸುರೇಶನ ಹೆಂಡತಿ ಅವಳು"

"ಅವನ್ಯಾಕೆ ಅವಳನ್ನು ಇಲ್ಲಿಯೇ ಬಿಟ್ಟು ಹೋಗಿದಾನೆ?"

"ನನಗೆ, ನಿಮಗೆ ಕಷ್ಟವಾಗದಿರಲಿ ಅಂತ. ಇನ್ನು ಕೆಲವೇ ದಿನಗಳಲ್ಲಿ ನಾನು ಬಾಣಂತನಕ್ಕೆ ಹೊರಟು ಹೋಗ್ತೀವಿ. ಆಗ ನಿಮ್ಮ ಜೊತೆಗೆ"

"ಏನೂ ಬೇಡ, ನೀನು ಬಾಣಂತನಕ್ಕೆ ಎಲ್ಲಿಗೂ ಹೋಗುವುದು ಬೇಡ. ಮೊದಲನೇ ಹೆರಿಗೆ ಮನೆಯಲ್ಲೇ ಆಗಲಿ"

"ನಿಮಗೆ ಕಷ್ಟವಾಗುಲ್ವಾ ಅತ್ತೆ"

"ಕಷ್ಟವೋ ಸುಖವೋ, ನನ್ನ ಈ ಆಸೆಯಾದರೂ ಪೂರೈಸಲಿ. ಸೀಮಂತಕ್ಕೆ ನಿನ್ನ ತಂದೆ ತಾಯಿ ಬಂದಾಗ ಹೇಳಿ ಬಿಡ್ತೀನಿ"

"ಅಮ್ಮನ ಆರೋಗ್ಯ ಚೆನ್ನಾಗಿಲ್ಲ. ಅವಳು ಇಲ್ಲಿಗೆ ಬಂದಿದ್ದರೆ ಎಲ್ಲರಿಗೂ ಕಷ್ಟ"

"ಅವರ್ಯಾಕೆ ಬೇಕು? ನಿನ್ನ ತಂಗಿ ಇದಾಳಲ್ಲ"

"ನನ್ನ ತಂಗಿ.. ನನ್ನ ತಂಗಿ ಯಾರು?"

"ಇನ್ಯಾರು? ನಿನ್ನ ಮುದ್ದಿನ ಮೈದುನನ ಹೆಂಡತಿ. ನಾನು ಸೊಸೆ ಅಂತ ಒಪ್ಪಿಕೊಳ್ಳಲಿ ಬಿಡಲಿ, ನೀವೆಲ್ಲಾ ಒಂದಾಗಿದೀರಲ್ಲ" ವ್ಯಂಗ್ಯದಿಂದ ನುಡಿದಳು. ಸುಶೀಲಾ ಮಂದಹಾಸ ಬೀರಿದಳು. ಹೇಮಾ ಕಲಿಸಿದ ಅನ್ನವನ್ನು ತಟ್ಟೆಗೆ ಬಡಿಸಿಕೊಂಡು ತಂದಿದ್ದಳು. ಸುಶೀಲಾ ಎದ್ದು ನಿಂತು ತಿನ್ನಲಾರಂಭಿಸಿದಳು.

"ಅತ್ತೇ ನೀವೂ ಹೋಗಿ ಊಟ ಮಾಡಿ ಈಗಾಗ್ಲೇ ಹೊತ್ತಾಗಿದೆ. ಹೇಮಾ ಇವರಿಗೆ ಬಡಿಸು" ಗಿರಿಜಮ್ಮ ಮನಸ್ಸಿಲ್ಲದ ಮನಸ್ಸಿನಲ್ಲಿ ಎದ್ದಳು. ಹೇಮಾ ನಿಧಾನವಾಗಿ ಬಡಿಸಿದಳು. ಊಟದ ನಂತರ ಗಿರಿಜಮ್ಮ ತೆಗೆದುಕೊಳ್ಳುವ ಮಾತ್ರೆಗಳನ್ನು ತಂದಿತ್ತಳು. ಗಿರಿಜಮ್ಮ ನಿಧಾನವಾಗಿ ಊಟ ಮಾಡಿ, ಮಾತ್ರೆಯನ್ನು ನುಂಗಿ ಮತ್ತೆ ಸುಶೀಲಳ ರೂಮಿಗೆ ಬಂದಳು.

"ನಾನು ಒಂದು ಗಳಿಗೆ ಮಲಗಿರ್ತೀನಿ. ಏನಾದ್ರೂ ತೊಂದರೆ ಇದ್ದರೆ ನನ್ನನ್ನು ಎಬ್ಬಿಸು. ನೀನು ಮಾತ್ರ ಆಯಾಸ ಮಾಡ್ಕೋಬೇಡ. ಭಾರ್ಗವ ಬಂದ ಕೂಡಲೇ ಡಾಕ್ಟರ ಬಳಿಗೆ ಹೋಗಿ ಬಾ"

"ನಾನು ಕರ್‍ಕೊಂಡು ಹೋಗಿ ಬರ್ಲಾ?" ಹೇಮ ಕೇಳಿದಾಗ, ಗಿರಿಜಮ್ಮ ಕುಹಕವಾಗಿ ನೋಡಿದಳು.

"ನಿನಗೆ ಯಾವ ಅನುಭವ ಇದೆ ಹೇಳು. ಇನ್ನು ನೆನ್ನೆ ಮೊನ್ನೆ ಗಂಡನ ಮನೆಗೆ ಬಂದವಳು. ನಿನ್ನ ಕೆಲಸ ಎಷ್ಟೋ ಅಷ್ಟನ್ನು ನೋಡ್ಕೋ" ಹೇಮಾ ಅಲ್ಲಿಂದ ಓಡಿ ಹೋಗಿದ್ದಳು. ಇದ್ದಕ್ಕಿದ್ದಂತೆ ಸುಶೀಲಾ ಸೊಂಟವನ್ನು ಕೈಯಲ್ಲಿ ಅದುಮುತ್ತಾ ಅಮ್ಮಾ ಎಂದು ನರಳ ತೊಡಗಿದಳು.

"ಏನಾಯ್ತೇ... ಸುಶೀಲಾ... ನಿನ್ನ ಗಂಡ ಮನೇಲಿಲ್ವಲ್ಲೇ"

"ಅತ್ತೇ ಹೇಮಂಗೆ ಹೇಳಿ. ಈಗ್ಲೇ ಡಾಕ್ಟರನ್ನ ಕರ್‍ಕೊಂಡು ಬರಲಿ. ನಂಗೆ ಸೊಂಟ ಹಿಡಿದುಕೊಂಡು ಬಿಟ್ಟಿದೆ" ಅಷ್ಟರಲ್ಲಿ ಹೇಮಾ ತಾನೇ ಬಂದಿದ್ದಳು.

"ಈ ರಸ್ತೆ ಕೊನೇಲಿ ಒಂದು ಕ್ಲಿನಿಕ್ ಇದೆ. ಅಲ್ಲಿ ಲೇಡಿ ಡಾಕ್ಟರು ಇದಾಳೆ. ಈಗಲೇ ಹೋಗಿ ಕರ್‍ಕೊಂಡು ಬಾ" ಆರ್ಡರ್ ಮಾಡಿದಳು. ಹೇಮಾ ಚಪ್ಪಲಿ ಮೆಟ್ಟಿ ಬೀದಿಗೆ ಇಳಿದಳು. ಕೆಲವೇ ನಿಮಿಷಗಳಲ್ಲಿ ಡಾಕ್ಟರೊಂದಿಗೆ ಬಂದಳು. ಆ ಡಾಕ್ಟರು ಪರಿಚಯದವಳೇ. ಬಾಗಿಲನ್ನು ಹಾಕಿಕೊಂಡು, ಸುಶೀಲಳನ್ನು ಪರೀಕ್ಷಿಸಿದಳು.

"ಗಾಬರಿ ಪಡಬೇಕಾದ್ದೇನಿಲ್ಲ. ಹೊಟ್ಟೆ ತುಂಬಾ ಗಾಳಿ ಸೇರಿಕೊಂಡಿದೆ. ಕಾಲು ಗಂಟೆಗೊಂದರಂತೆ, ಈ ಮಾತ್ರೆಯನ್ನು ಒಂದು ಲೋಟ ಬೆಚ್ಚನೆಯ ನೀರಿಗೆ ಹಾಕಿ ಕುಡಿಸಬೇಕು. ಸಾಯಂಕಾಲದ ಹೊತ್ತಿಗೆ ಸರಿ ಹೋಗ್ತಾರೆ" ಎನ್ನುತ್ತಾ ಮಾತ್ರೆಯನ್ನು ಬರೆದುಕೊಟ್ಟಳು. ಹೇಮಾ ಡಾಕ್ಟರೊಂದಿಗೆ ಹೊರಟಳು. ಗಿರಿಜಮ್ಮ ದುಡ್ಡು ಕೊಟ್ಟಳು. "ಮೆಡಿಕಲ್ ಷಾಪಿನಿಂದ ಮಾತ್ರೆಗಳನ್ನು ತಗೊಂಡು ಬಾ" ಸುಶೀಲ ನೋವನ್ನು ನಟಿಸಿ, ಕಿರುನಗೆ ಬೀರಿದಳು.

ಅತ್ತೆ ನೀವು ಗಾಬರಿ ಆಗ್ಬೇಡಿ. ಡಾಕ್ಟರು ಬಂದು ಹೋದ್ರಲ್ಲ. ನೆನ್ನೆ ರಾತ್ರಿ ಇಷ್ಟ ಆಯ್ತು ಅಂತ ಪುಳಿಯೋಗರೆ ತಿಂದದ್ದು ಹೆಚ್ಚಾಗಿರಬೇಕು. ಜೊತೆಗೆ ನಿಮ್ಮ ಮೊಮ್ಮಗನ ಚೇಷ್ಟೆ ಅತಿಯಾಗಿದೆ. ಓಡಾಡ್ತಾನೇ ಇರ್ತಾನೆ" ಹೊಟ್ಟೆಯನ್ನು ಕೈಗಳಿಂದ ನೀವಿಕೊಂಡಳು.

"ಮಗು ಚೇಷ್ಟೆ ಮಾಡುವುದು ಆರೋಗ್ಯದ ಲಕ್ಷಣ. ನಿನ್ನ ಗಂಡ ನನ್ನನ್ನು ಕಮ್ಮಿ ಸತಾಯಿಸಿದನಾ? ಹಾಗೆ ನೋಡಿದ್ರೆ ಸುರೇಶನೇ ವಾಸಿ. ಮಾತನ್ನು ಮುಂದುವರೆಸದೇ ಸುಮ್ಮನಾದಳು. ಸುಶೀಲಾ ಸುಮ್ಮನೇ ಅತ್ತೆಯ ಕಡೆ ನೋಡಿ ಮತ್ತೆ ಮುಖವನ್ನು ಕಿವುಚಿದಳು.

ಹೇಮಾ ಮಾತ್ರೆಗಳನ್ನು ಕೊಂಡು ತಂದಳು. ಕುಡಿಯುವ ನೀರನ್ನು ಬೆಚ್ಚಗೆ ಮಾಡಿ, ಮಾತ್ರೆಯನ್ನು ನೀರಿನಲ್ಲಿ ಮುಳುಗಿಸಿದಳು. ಕ್ಷಣದಲ್ಲಿ ಮಾತ್ರೆ ಕರಗಿತು. ಸುಶೀಲಾ ಸಿಹಿಯಾಗಿದ್ದ ದ್ರವವನ್ನು ಕುಡಿದಳು.

"ನೀನು ಇಲ್ಲೇ ಇದ್ದು ಕಾಲುಗಂಟೆಗೊಂದು ಸಲ ಔಷಧಿಯನ್ನು ಕೊಡು. ಅಲ್ಲಿ ಇಲ್ಲಿ ಎದ್ದು ಹೋಗಬೇಡ. ನಿದ್ದೆ ಮಾಡಬೇಡ"

"ಆಯ್ತು ಅತ್ತೆ" ಗಿರಿಜಮ್ಮ ತನ್ನ ರೂಮಿಗೆ ಹೋಗಿದ್ದಳು. ಸುಶೀಲಾ ಹೇಮಾಳ ಕೈ ಹಿಡಿದು ನಕ್ಕಳು.

"ಹೇಗಿತ್ತು ನನ್ನ ನಾಟಕಾ?"

"ಅಂದರೆ... ನಂಗೆ ಗೊತ್ತಾಗ್ಲಿಲ್ಲ"

"ನಂಗೆ ಯಾವ ನೋವೂ ಇರಲಿಲ್ಲ. ನಿಂಗೋಸ್ಕರ ಈ ನಾಟಕ ಆಡಿದ್ದು. ಅತ್ತೆಗೆ ಗೊತ್ತಾಗಲಿ ನಿನ್ನ ಬೆಲೆ ಎಷ್ಟು ಅಂತ"

"ಇದು ತಪ್ಪಲ್ವಾ ಅಕ್ಕ. ನಂಗೆ ಎಷ್ಟು ಗಾಬರಿ ಆಗಿತ್ತು. ಡಾಕ್ಟರು ಏನೂ ಹೇಳಲಿಲ್ಲ"

ನಾನು ಅವರ ಹತ್ತಿರ ಮಾತಾಡಿದೆ. ಅತ್ತೆಯ ವಿಚಾರ ಅವರಿಗೆ ಗೊತ್ತು. ಇದು ಸಿಹಿ ಪೆಪ್ಪರ್‌ಮೆಂಟ್. ಯಾವ ಔಷಧಿಯೂ ಅಲ್ಲ"

"ನಿಜವಾಗಿಯೂ"

"ಹೂಂ... ಬೇಕಾದ್ರೆ ನೀನೂ ತಿಂದು ನೋಡು" ಇಬ್ಬರೂ ಮನಃಪೂರ್ತಿ ನಕ್ಕರು.

ಶನಿವಾರ ರಾತ್ರಿಯೇ ಸುರೇಶ ಬಂದಿಳಿದ. ಹೇಮಾ ನಾಚಿಕೆಯಿಂದ ಅವನ ಎದುರಿಗೆ ಬಂದಿರಲಿಲ್ಲ. ಸುಶೀಲ ಆಯಾಸವೆಂದು ಮಲಗಿದ್ದಳು. ಸುರೇಶ, ವಾಡಿಕೆಯಂತೆ 'ಅಮ್ಮಾ' ಎನ್ನುತ್ತಾ ಒಳಗೆ ಬಂದ. ಗಿರಿಜಮ್ಮ ಮಲಗಿದ್ದವಳು ಎದ್ದು ಬಂದಳು.

"ಹೇಗಿದೀಯಮ್ಮ..." ಕೇಳಿದ.

"ದೇವರ ದಯದಿಂದ ಚೆನ್ನಾಗಿದೀನಿ. ಊಟಕ್ಕೇಳು, ಕೈಕಾಲು ತೊಳ್ಕೊಂಡು ಬಾ"

"ಇದೇನಿದು ಮನೆಯಲ್ಲಿ ಯಾರೂ ಇದ್ದಂತಿಲ್ಲ. ಅತ್ತಿಗೆ ತವರು ಮನೆಗೆ ಹೊರಟು ಹೋದ್ರಾ? ಹೇಮಾ ಎಲ್ಲಿ? ಅವಳೂ ಅವರಮ್ಮನ ಮನೆಗೆ ಹೋಗಿದಾಳಾ?"

"ಇಲ್ಲ, ಎಲ್ರೂ ಮನೇಲೇ ಇದೀನಿ. ನಾಡಿದ್ದು ಸೋಮವಾರ, ಸುಶೀಲಂಗೆ ಸೀಮಂತ. ಬಳೆ ತೊಡಿಸುವ ಆರತಿ ಶಾಸ್ತ್ರ. ನೀನೇ ಕೇಳಿದ್ದು ಒಳ್ಳೇದಾಯ್ತು"

"ಅತ್ತಿಗೆ ಹುಶಾರಾಗಿದಾರಾ?"

"ಹುಂ... ಚೆನ್ನಾಗಿದಾಳೆ. ನಿನ್ನ ಹೆಂಡ್ತಿ ಅವಳ ಯೋಗಕ್ಷೇಮಾನ ಚೆನ್ನಾಗಿ ನೋಡ್ಕೋತಾಳೆ" ಭಾರ್ಗವನೆಂದ.

"ನಿಂಗಿನ್ನು ಮನೆ ಸಿಕ್ಕಿಲ್ವಾ? ನಿನ್ನ ಹೆಂಡ್ತಿ ಇಲ್ಲೇ ಇದಾಳೆ" ತಾಯಿ ಕುಹಕದಿಂದ ಕೇಳಿದಾಗ ಅವನು ಹುಬ್ಬು ಗಂಟಿಕ್ಕಿದ.

"ಅತ್ತಿಗೆ ಜತೆಗಿರಲಿ ಅಂತ ಬಿಟ್ಟು ಹೋಗಿದೀನಿ. ನನಗೆ ಕ್ವಾರ್ಟ್ರಸ್ ಸಿಕ್ಕಿದೆ. ನಿನಗೆ ಸರಿ ಹೋಗ್ತಿಲ್ಲ ಅಂತ ಇದ್ದರೆ ಹೇಳು. ನಾನು ನಾಳೆ ಬೆಳಿಗ್ಗೇನೇ ಅವಳನ್ನು ಕರ್ಕೊಂಡು ಹೊರಟು ಹೋಗ್ತೀನಿ" ಗಿರಿಜಮ್ಮ ಉತ್ತರಿಸದೇ ಎದ್ದು ಹೋಗಿದ್ದಳು.

"ಅಮ್ಮನ ಮಾತಿಗೆ ಬೇಸರ ಪಟ್ಕೋಬೇಡ. ಅವಳಿಗೂ ವಯಸ್ಸಾಯ್ತು, ಕೈಲಾಗೊಲ್ಲ. ಏನೋ ಆಡ್ತಾಳೆ. ಸೀಮಂತ ಆದ ಮೇಲೆ. ನಾನು ಅವಳನ್ನು ತವರು ಮನೆಗೆ ಬಾಣಂತನಕ್ಕೆ ಬಿಟ್ಟು ಬರ್ತೀನಿ. ನೀನು ಹೇಮನ್ನ ಕರ್ಕೊಂಡು ಹೋಗು"

"ಇಲ್ಲಿ ಅಮ್ಮ ಒಬ್ಬಳೇ ಆಗ್ತಾಳಲ್ಲ ಅಂತ ಯೋಚನೆ"

"ಹಾಗಂತ, ಮದುವೆಯಾದ ಹೊಸದರಲ್ಲೇ ಹೆಂಡತೀನ ದೂರ ಇಡೋದು ತಪ್ಪು. ಇಬ್ಬರ ಮನಸ್ಸು ಕೆಡುತ್ತೆ. ಈ ಪಕ್ಷಕ್ಕೆ ನಿಧಾನವಾಗಿಯೇ ಮದುವೆಯಾಗಬಹುದಾಗಿತ್ತಲ್ಲ. ಹೇಮಾ ಒಳ್ಳೆಯ ಹುಡುಗಿ ಸುಮ್ಮನಿದಾಳೆ. ಇನ್ಯಾರಾದ್ರೂ ಆಗಿದ್ದಿದ್ರೆ ಜಗಳವಾಡಿರುತ್ತಿದ್ದರು"

"ನಾವಿಬ್ರೂ ಒಂದು ಒಪ್ಪಂದಕ್ಕೆ ಬಂದಿದೀನಿ. ಅಮ್ಮ ಅವಳನ್ನು ಸೊಸೆ ಅಂತ ಒಪ್ಪಿಕೊಳ್ಳದ ಹೊರತು.. ನಾವಿಬ್ಬರೂ ಒಟ್ಟಿಗೇ ಮಲಗೋದಿಲ್ಲ ಅಂತ"

"ಛೇ... ಇದೆಂಥಾ ಒಪ್ಪಂದ? ಅಮ್ಮನ ಸಿಟ್ಟಿಗೆ ಹೇಮಂಗ್ಯಾಕೆ ಶಿಕ್ಷೆ? ಆ ಹುಡುಗಿಯ ಮನಸ್ಸಿಗೆ ನೋವನ್ನುಂಟು ಮಾಡಬೇಡ. ಈ ಸಾರಿ ಅವಳನ್ನು ಕರೆದುಕೊಂಡು ಹೋಗು. ಅಮ್ಮನನ್ನು ಕರ್ಕೊಂಡು ಹೋಗು"

"ನೋಡೋಣ, ಆ ವಿಷಯಾನ ಆಮೇಲೆ ಚರ್ಚಿಸಿದರಾಯ್ತು. ನಾನು ಅತ್ತಿಗೇನ ಮಾತನಾಡಿಸಿಕೊಂಡು ಬರ್ತೀನಿ" ಎನ್ನುತ್ತಾ ಅತ್ತಿಗೆ ಇದ್ದ ಕಡೆಗೆ ಬಂದ. ಹೇಮಾ ಕೂಡಾ ಅಲ್ಲಿಯೇ ಇದ್ದಳು. "ಅತ್ತಿಗೆ ಈ ಹುಡುಗಿ ಯಾರು?" ಕೀಟಲೆಯ ಧ್ವನಿಯಲ್ಲಿ ಕೇಳಿದ.

"ಹೇಮಾ ಅಂತ, ನಿನಗೋಸ್ಕರ ನೋಡಿರುವ ಹೆಣ್ಣು. ಏನಪ್ಪಾ ಹೇಗಿದೀಯ?" ಅವಳೇ ವಿಚಾರಿಸಿದಳು.

"ಆರಾಮವಾಗಿದೀನಿ. ಯಾವ ಚಿಂತೆಯೂ ಇಲ್ಲ" ಹೇಮಾಳ ಕಡೆ ನೋಡಿ ಕಣ್ಣು ಮಿಟುಕಿಸಿದ. ನೀವು ಹೇಗಿದೀರಿ ಅತ್ತಿಗೆ?"

"ನಾನೂ ಅಷ್ಟೇ. ಹಾಯಾಗಿದೀನಿ. ಈ ಹುಡುಗಿ ಹೇಮಾ, ನನ್ನನ್ನು ತುಂಬಾ ಚೆನ್ನಾಗಿ ನೋಡ್ಕೊಳ್ತಾಳೆ. ನಾವಿಬ್ರೂ ಅಕ್ಕ ತಂಗಿಯರ ಥರ ಇದೀವಿ"

"ಅತ್ತಿಗೇ ನಿಮ್ಮ ತಂಗೀನ ಕಳಿಸಿ. ನನಗೆ ಬಡಿಸಲಿ, ಹಸಿವಾಗ್ತಿದೆ" ಎನ್ನುತ್ತಾ ಹೇಮಾಳ ಕೈ ಹಿಡಿದು ಊಟದ ಮನೆಗೆ ಬಂದ. ಹೇಮಾ ಬಡಿಸಿದಳು. ಕೈಕಾಲು ಮುಖ ತೊಳೆದು ಊಟ ಮಾಡಿದ. ಹೇಮಾ ಎಲ್ಲರಿಗೂ ಕುಡಿಯಲು ಹಾಲನ್ನು ಕೊಟ್ಟು ಸುರೇಶ ಇದ್ದ ರೂಮಿಗೆ ಬಂದಳು.

"ಹೇಮಾ ಬೇಜಾರೇನೇ? ನಿನ್ನನ್ನು ಬಿಟ್ಟು ಹೋಗಿದೀನಿ ಅಂತ"

"ಹೂಂ, ಸ್ವಲ್ಪ. ಆದರೆ ಅಕ್ಕ ಜತೇಲಿರೋದ್ರಿಂದ ಬೇಜಾರೇನಿಲ್ಲ"

"ಅವರು ಬಾಣಂತನಕ್ಕೆ ತಾಯಿ ಮನೆಗೆ ಹೊರಟು ಹೋದ್ಮೇಲೆ"

"ಇಲ್ಲ, ಅವರು ಇಲ್ಲೇ ಇರ್ತಾರೆ. ಅವರ ತಾಯಿಗೆ ಹುಶಾರಿಲ್ಲವಂತೆ"

"ಹೌದಾ? ಅಣ್ಣ ಹಾಗಂದ, ಅದು ಬಿಡು. ಅಮ್ಮ.... ಅಮ್ಮ... ಏನಂತಾಳೆ? ನಿನ್ನ ಮೇಲಿನ ಕೋಪ ಕಡಿಮೆಯಾಗಿಲ್ವಾ?"

"ಕೋಪದ ವಿಷಯ ಗೊತ್ತಿಲ್ಲ. ಆದರೆ ನನ್ನನ್ನು ಯಾರೋ ಹೊರಗಿನವಳು ಅನ್ನೋ ಥರ ಮಾತಾಡ್ತಾರೆ. ನಂಗೆ ಅದೇ ಬೇಜಾರು"

"ನಿನ್ನನ್ನ ಅಮ್ಮನ್ನ ಮಂಡ್ಯಕ್ಕೆ ಕರ್ಕೊಂಡು ಹೋಗು ಅಂತ ಅಣ್ಣ ಹೇಳಿದ. ಹಾಗೇ ಮಾಡೋಣಾಂತ"

"ಅಮ್ಮ ಬರೋಕೆ ಒಪ್ತಾರಾ?"

"ಏನೋ ಗೊತ್ತಿಲ್ಲ. ಮೊದಲು ಈ ಫಂಕ್ಷನ್ ಆಗಲಿ. ನಾನು ಅಮ್ಮನ ಹತ್ರ ಮಾತಾಡ್ತೀನಿ. ಅತ್ತಿಗೆ ಎಷ್ಟು ದಪ್ಪ ಆಗಿದಾರೆ ಅಲ್ವಾ? ಪಾಪ ಅವರನ್ನು ನೋಡಿದರೆ ಅಯ್ಯೋ ಅಂತ ಅನ್ನಿಸುತ್ತೆ" ಹೇಮಾ ಮಾತಾಡಲಿಲ್ಲ. ಏನೋ ಕನಸು ಕಾಣುತ್ತಿದ್ದಳು. ಇಬ್ಬರೂ ಅವರವರ ಪಾಡಿಗೆ ಮಲಗಿದರು.

* * * * *

ಭಾರ್ಗವನ ಕೋಣೆಯ ದೀಪ ಉರಿಯುತ್ತಿದುದನ್ನು ಗಮನಿಸಿ, ಗಿರಿಜಮ್ಮ ಆತಂಕದಿಂದ ಎದ್ದು ಬಂದಳು. ಬಾಗಿಲು ಓರೆಯಾಗಿತ್ತು. ಭಾರ್ಗವ ಮಾತಾಡುತ್ತಾ ಇದ್ದ. ಗಿರಿಜಮ್ಮ ಅಲ್ಲೇ ನಿಂತಳು.

"ಪ್ರೀತಿಸಿ ಮದುವೆಯಾದೋಳನ್ನ ಹೀಗೆ ದೂರ ಇಟ್ಟಿದಾನಲ್ಲ. ನಿನ್ನ ಮುದ್ದು ಮೈದುನ. ಅವನಿಗೆ ಬುದ್ಧಿ ಬೇಡ್ವಾ? ಆ ಹುಡುಗಿಗೆ ಹೇಗಾಗಿರಬೇಡ. ನೀನಾದ್ರೂ ಅವನಿಗೆ ತಿಳುವಳಿಕೆ ಹೇಳು. ಅವನಲ್ಲಿ, ಇವಳಿಲ್ಲಿ... ಇದೇನು ಚೆನ್ನ, ನಾವಿಬ್ಬರೂ ಮದುವೆಯಾದ ಹೊಸತರಲ್ಲಿ ಎಷ್ಟು ಜಾಲಿಯಾಗಿದ್ದೆವು"

"ಅದು ಅವರ ಪರ್ಸನಲ್ ವಿಷಯ. ಹೇಮಾನೇ ಸುಮ್ಮನಿರುವಾಗ ನನಗೇಕೆ?"

"ಇದೇನೇ ಸುಶೀ... ಹೀಗೆ ಮಾತಾಡ್ತೀ.. ಹೇಮಾ ನಿನ್ನ ಹಾಗೇ ಹೆಣ್ಣು ಅವಳಿಗೂ ಸ್ವಂತ ಆಸೆಗಳಿರುತ್ತವೆ. ಅವರಿಬ್ಬರ ಮದುವೆಗೆ ನಾವೂ ಸಾಕ್ಷಿಯಾಗಿದೀವಿ. ಅಣ್ಣನಾಗಿ ಅತ್ತಿಗೆಯಾಗಿ ನಮ್ಮ ಕರ್ತವ್ಯವೂ ಇರುತ್ತೆ. ನೀನು ತಿಳುವಳಿಕೆ ಹೇಳು"

"ನಿಮ್ಮ ಅಮ್ಮನೇ ಅವರ ಕರ್ತವ್ಯವನ್ನು ಮರೆತಿವಾರೆ. ಇದುವರೆಗೂ ಅವರು ಹೇಮಾಳನ್ನು ಸೊಸೆ ಅಂತ ಒಪ್ಪಿಕೊಂಡಿಲ್ಲ. ಅವರು ಸೊಸೆ ಅಂತ ಒಪ್ಪಿಕೊಂಡರೆ ಅವರಿಬ್ಬರೂ ಹತ್ತಿರ ಆಗುತ್ತಾರೆ. ಇಲ್ಲದಿದ್ದರೆ ಹೀಗೇ... ಅವಳು ಇಲ್ಲೇ, ಅವನು ಅಲ್ಲೇ.."

"ಹಾಗಾದರೆ ಅವಳನ್ನು ಅವರ ಮನೆಯ ತಾಯಿಯ ಮನೆಗೆ ಕಳಿಸಿ ಬಿಡೋಣ. ಅವಳು ಇಲ್ಲಿ ನಮ್ಮ ಚಾಕರಿ ಮಾಡಿಕೊಂಡು ಯಾಕೆ ಇರಬೇಕು?"

"ಅವಳಿಗೆ ಅಮ್ಮನ ಮನೆ ಎಲ್ಲಿದೆ? ಆಕೆ ಮತ್ತೆಲ್ಲಿ ಸೇರಿಸ್ತಾಳೆ?"

"ನೋಡು ಎಂಥಾ ಕಷ್ಟ ಈ ಹುಡುಗಿಗೆ... ಅಮ್ಮನ ಮನೆ, ಅತ್ತೆಯ ಮನೆ, ಗಂಡನ ಮನೆ ಇದ್ದು ಒಂಟಿಯ ಜೀವನ, ನೀರಸ ಬಾಳು"

"ಅತ್ತೆ ಒಪ್ಪಿಕೊಳ್ಳೋದೇ ಇಲ್ಲ ಅಂತೀರಾ? ನೀವ್ಯಾಕೆ ಅವರ ಹತ್ರ ಮಾತನಾಡಬಾರದು"

"ನಾನಾ?... ಇದು ಹೆಂಗಸರು ಹೆಂಗಸರೇ ಬಗೆಹರಿಸಿಕೊಳ್ಳಬೇಕಲ್ವಾ?"

"ಏನು ಹೀಗೆ ಮಾತಾಡ್ತೀರಿ? ಇವರಿಬ್ಬರೂ ದೂರ ದೂರ ಇರೋಕೆ ನಿಮ್ಮಮ್ಮನೇ ಕಾರಣ. ನಾನೇ ಅವರ ಹತ್ರ ಮಾತಾಡ್ತೀನಿ."

"ಅವಳು ಬೈದರೇ? ನೀನು ಬಸುರಿ ಕಣೇ. ತಡೆದುಕೊಳ್ಳುವ ಶಕ್ತಿ ಇರೋಲ್ಲ. ಏನಾದರೂ ಹೆಚ್ಚು ಕಡಿಮೆ ಆದರೆ"

"ಏನೂ ಆಗೊಲ್ಲ... ಒಂದ್ನಿಮಿಷ ಸುಮ್ಮನೆ ಇರೋಲ್ಲ ನಿಮ್ಮ ಮಗ. ಅದೆಷ್ಟು ಓಡಾಡ್ತಾನೆ. ನೀವೂ ಹೀಗೇ ಆಡ್ತಿದ್ರಂತೆ. ಕಿಲಕಿಲನೆ ನಕ್ಕಳು. ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡಳು.

"ಹಾಗಂತ ಅಮ್ಮ ಹೇಳಿದ್ಲಾ? ನಂಗೇನು ಗೊತ್ತು ನಾನೇನು ಮಾಡ್ತಿದ್ದೆ ಅಂತ"

"ನೋಡಿ... ಇಲ್ಲಿ ಕೈ ಇಡಿ. ಹೇಗೆ ಪುಳಕ್ ಪುಳಕ್ ಅಂತ ಓಡ್ತಿದಾನೆ" ಭಾರ್ಗವ ಅವಳ ಹೊಟ್ಟೆಯ ಮೇಲೆ ಕೈ ಇಡುವ ಮೊದಲು ಬಾಗಿಲ ಕಡೆ ನೋಡಿದ.

"ಬಾಗಿಲನ್ನು ಸರಿಯಾಗಿ ಹಾಕಿ ಬರ್ತೀನಿ" ಎಂದು ಎದ್ದು ಬಂದವನು. ಬಾಗಿಲ ಮರೆಯಲ್ಲಿ ನಿಂತ ತಾಯಿಯನ್ನು ಕಂಡ. ಎದೆ ಜಗ್ರೆಂದಿತು, ಸಾವರಿಸಿಕೊಂಡ.

"ಏನು ಬೇಕಮ್ಮಾ.. ಇಲ್ಯಾಕೆ ನಿಂತಿದೀಯ?" ಬೇಸರದಿಂದ ಕೇಳಿದ.

"ನಿನ್ನ ರೂಮಿನ ದೀಪ ಉರೀತಿತ್ತು. ಸುಶೀಲಾ ಹುಶಾರಾಗಿದಾಳೆ ತಾನೇ"

"ಹುಶಾರಾಗಿದಾಳೆ, ಏನಾದ್ರೂ ತೊಂದರೆ ಇದ್ದರೆ ನಿನ್ನನ್ನೇ ಮೊದಲು ಕರೆಯೋದು. ಹೋಗಿ ಮಲಕ್ಕೋ" ತಾಯಿ ಅತ್ತ ಸರಿಯುವವರೆಗೂ ತಡೆದಿದ್ದು ಬಾಗಿಲನ್ನು ಭದ್ರ ಪಡಿಸಿದ. ಅಮ್ಮಾ ಬಾಗಿಲಾಚೆ ನಿಂತಿದ್ದಳು. ಅವಳಿಗ್ಯಾಕೆ ಕದ್ದು ಮಾತನ್ನು ಕೇಳಿಸಿಕೊಳ್ಳುವ ಚಪಲವೋ?" ಎನ್ನುತ್ತಾ ದೀಪವನ್ನಾರಿಸಿದ.

"ಚಕ್ಕುಲಿ ಉಂಡೆಗಳನ್ನು ಮಾಡಿಕೊಡ್ತೀನಿ ಅಂತ ಹೇಳಿದವರು ಯಾರ ಕೈಯಲ್ಲೋ ಬರುಕ್ಕಾಗುಲ್ಲ. ಏನೋ ಅಡ್ಡಿ ಅಂತ ಹೇಳಿ ಕಳಿಸಿದಾರೆ. ಈಗ ಏನು ಮಾಡೋದು?" ಗಿರಿಜಮ್ಮ ಸೊಸೆಯ ಕೈಲಿ ಹೇಳಿಕೊಂಡಾಗ, ಸುಶೀಲಳೂ ಕಳವಳಗೊಂಡಳು. ತನ್ನ ತಾಯಿಯ ಮನೆಯವರಿಗೆ, ಆಹ್ವಾನ ನೀಡಿದ್ದಾಗಿತ್ತು. ತಾಯಿಗೆ ಮಾಡಿಕೊಂಡು ಬಾ ಅಂತ ಹೇಳಲು ಸಮಯವೂ ಇಲ್ಲ. ಆಕೆ ಕೈಯಲ್ಲಿ ಆಗುವಂತೆಯೂ ಇರಲಿಲ್ಲ. ಗಂಡನಿಗೆ ಹೇಳಿದಳು.

"ಏನ್ರೀ ಮಾಡೋದು? ಅಂಗಡಿಯಿಂದ ಉಂಡೆ ಚಕ್ಕುಲಿ ಕೊಂಡು ಕೊಂಡು ಬನ್ನಿ. ಈಗ ಹೀಗೆ ಕಡೇ ಗಳಿಗೇಲಿ ಆಕೆ ಕೈ ಕೊಟ್ಟರೆ... ಎಂಥಾ ಫಜೀತಿ?"

"ಅದು ಇಲ್ದೇ ಇದ್ದರೆ ಆಗುಲ್ವಾ?" ಭಾರ್ಗವ ಕೇಳಿದ.

"ಅದೆಂಥ ಚೆನ್ನ? ಆರತಿ ಎಂದರೆ, ಉಂಡೆ ಚಕ್ಕುಲಿಯೇ ಮುಖ್ಯ. ಈಗ ಆರ್ಡರ್ ತಗೊಂಡು ಮಾಡಿಕೊಡೋರು ಯಾರೂ ಇಲ್ಲ"

"ಮನೇಲಿ ಈಗ ಮಾಡೋಕೂ ಆಗೊಲ್ಲ. ನಾನು ವಿಚಾರಿಸಿಕೊಂಡು ಬರ್ತೀನಿ"

"ಒಂದ್ಮಾತು.. ಹೇಮಾಳ ತಾಯೀನ ಕೇಳಿದರೆ? ಆಕೆ ಖಂಡಿತಾ ಇಲ್ಲ ಅಂತ ಹೇಳೊಲ್ಲ. ಅವರಿಗೆ ಹೇಳಿ ಬರ್ತೀರಾ?"

"ಅವರಿಗೆ ನಮ್ಮ ಮೇಲೆ ಅಸಮಾಧಾನ. ಹೋಗಿ ಕೇಳಿದರೆ, ಕೈ ತೋರಿಸಿ ಅವಲಕ್ಷಣ ಅಂತ ಅನ್ನಿಸಿಕೊಂಡ ಹಾಗಾಗುತ್ತೆ"

"ನಾನೇ ಹೋಗಿ ಕೇಳಿದರೆ, ಖಂಡಿತಾ ಇಲ್ಲ ಅನ್ನೊಲ್ಲ"

"ನೀನಾ? ಈ ಅವಸ್ಥೇಲಿ..." ತಮಾಷೆಯಾಗಿ ನಕ್ಕ.

"ನನ್ನನ್ನ ಈ ಅವಸ್ಥೆಗೆ ತಂದೋರು ನೀವು, ನೆನಪಿರಲಿ. ನನ್ನನ್ನು ಈಗಲೇ ಅವರ ಮನೆಗೆ ಕರ್ಕೊಂಡು ಹೋಗಿ. ನಾನು ಮಾತಾಡ್ತೀನಿ. ನೀವು ಬರದೇ ಇದ್ರೆ ನಾನು ಸುರೇಶನ ಜತೇಲಿ ಹೋಗ್ತೀನಿ"

"ಸುರೇಶಂಗೆ ಯಾಕೆ ಅವಮಾನ? ಅವರ ಮಗಳನ್ನು ಮದುವೆಯಾದದ್ದೇ ತಪ್ಪು ಅನ್ನೋ ಥರ ವರ್ತಿಸ್ತಾರೆ. ನಡೀ... ನಾನೇ ಬರ್ತೀನಿ. ಮೊದಲು ಅವರಿಗೆ ಆಹ್ವಾನ ಕೊಡೋಣ, ನಂತರ ಕೇಳೋಣ" ಇಬ್ಬರೂ ಸಾವಿತ್ರಿಯ ಮನೆಗೆ ಹೊರಟರು.

ನಡೆಯಲಾಗದೇ ಭಾರವಾದ ಹೊಟ್ಟೆಯನ್ನು ಹೊತ್ತುಕೊಂಡು ಮೆಟ್ಟಿಲನ್ನು ಹತ್ತಿ ಬಂದವಳನ್ನು ಕಣ್ಣು ಕಿರಿದು ಮಾಡಿ ನೋಡಿದಳು ಸಾವಿತ್ರಿ"

"ಚೆನ್ನಾಗಿದೀರಾ ಆಂಟಿ" ಎನ್ನುತ್ತಾ ಭಾರ್ಗವ ಬಳಿಗೆ ಬಂದ.

"ಇನ್ನು ನಿನಗೆ ಹೆರಿಗೆ ಆಗಿಲ್ವಾ?" ಸಾವಿತ್ರಿ ಕೇಳಿದಳು.

"ಸೋಮವಾರ ಸೀಮಂತ ಇಟ್ಟುಕೊಂಡಿದಾರೆ. ನೀವು ಬರಬೇಕು. ನಿಮ್ಮನ್ನ ಕರೆಯೋಕೆ ನಾನೇ ಬಂದಿದೀನಿ"

"ನೀನ್ಯಾಕಮ್ಮ ಬರೋಕೆ ಹೋದೆ? ಭಾರ್ಗವನ ಕೈಲಿ ಹೇಳಿ ಕಳಿಸಿದ್ದರೂ ಆಗ್ತಿತ್ತು. ಅದ್ಸರಿ.. ಅವಳು ಬರಲಿಲ್ವಾ? ಹೇಗಿದಾಳೆ?"

"ಯಾರು? ಹೇಮಾನ?.. ಇಲ್ಲ, ಸುರೇಶನ ಜತೆ ಮಾರ್ಕೆಟ್ಟಿಗೆ ಹೋಗಿದ್ದಳು."

"ಗಿರಿಜಾ ಹೇಗಿದಾಳೆ? ಹೇಮನ್ನ ಚೆನ್ನಾಗಿ ನಡೆಸ್ಕೋತಿದಾಳಾ...?

"ಹುಂ... ಆಂಟಿ, ಯಾವ ಸಮಸ್ಯೆಯೂ ಇಲ್ಲ. ಈ ವರ್ಷದೊಳಗೆ ನೀವು ಅಜ್ಜಿಯಾಗ್ತೀರಿ"

"ಅಂದ್ರೆ ನಮ್ಮ ಹೇಮಾ... ಮದುವೆಯಾಗಿ ತಿಂಗಳು ಆಗಿದೆ ಅಷ್ಟೆ. ಏನಪ್ಪಾ... ಮದುವೆಗೆ ಮುಂಚೇನೇ ಏನಾದರೂ ಅವಾಂತರ ಮಾಡಿಕೊಂಡಿದ್ದರೆ ಆ ವಿಷಯ ನಂಗೊತ್ತಿಲ್ಲ."

"ಛೆ..ಛೆ.. ಹಾಗೇನಿಲ್ಲ. ಸುಮ್ಮನೇ ವಿಚಾರಕ್ಕೆ ಹೇಳಿದೆ. ಅಂಥದ್ದನ್ನೆಲ್ಲಾ ಕನಸು ಮನಸ್ನಲ್ಲೂ ಯೋಚಿಸ್ಬೇಡಿ. ಹೇಮಾ ಅಪರಂಜಿ. ನನಗೆ ನನ್ನ ಚಿಕ್ಕ ತಂಗಿ ಸಿಕ್ಕಿದಂತಾಗಿದೆ"

"ಏನೋಮ್ಮ ನಿನ್ನ ಬಾಯಿ ಒಳ್ಳೆಯದು. ನಂಗೆ ಗಿರಿಜಂದೇ ಭಯ. ತಿಳಿದೂ ತಿಳಿದೂ ನಾನು ಅವಿವೇಕ ಮಾಡಿಬಿಟ್ಟೆ."

"ನಿಮ್ಮ ನಿಮ್ಮಲ್ಲಿ ಏನೇ ಭಿನ್ನಾಭಿಪ್ರಾಯ ಇದ್ದರೂ ಇನ್ನಾದರೂ ಮರೆತು ಬಿಡಿ ಆಂಟಿ. ನಮ್ಮ ಮನೆಯ ಸಮಾರಂಭಕ್ಕೆ ಖಂಡಿತಾ ಬರಬೇಕು. ಹಾಗೇ ನನ್ನದೊಂದು ಕೋರಿಕೆ. ನಮ್ಮ ಅತ್ತೆಯ ತಪ್ಪು ಏನೇ ಇದ್ದರೂ, ಅವರ ಪರವಾಗಿ ನಾವು ಕ್ಷಮೆ ಕೇಳ್ತೀವಿ, ಅಲ್ವೇನ್ರೀ?"

"ಹುಂ... ಹೂಂ.... ಆಂಟಿ, ಅಮ್ಮಂದು ಏನೇ ತಪ್ಪಿದ್ರೂ ಕ್ಷಮಿಸಿ"

"ಬಿಡಪ್ಪಾ... ನೀನ್ಯಾಕೆ ಕ್ಷಮೆ ಕೇಳ್ಬೇಕು. ನಮಗೆಲ್ಲಿದೆ ಆ ಯೋಗ್ಯತೆ? ನೀವುಗಳು ಚೆನ್ನಾಗಿದ್ರೆ ಅಷ್ಟೇ ಸಾಕು. ಹೇಮಾ ನನ್ನನ್ನು ಮರೆತೇ ಬಿಟ್ಟಿದಾಳಾ?"

"ತಾಯೀನ ಯಾರಾದ್ರೂ ಮರೆಯೋಕೆ ಸಾಧ್ಯಾನಾ ಆಂಟಿ? ನೀವು ಬಂದು ಮಾತಾಡ್ಸಿದ್ರೆ ಸಾಕು. ಓಡಿ ಬಂದು ತಬ್ಬಿ ಕೊಳ್ತಾಳೆ, ನಾವಿನ್ನು ಬರ್ತೀವಿ"

"ದಿನ ತುಂಬಿದ ಬಸುರಿ ಹುಡುಗಿ, ತಿನ್ನೋಕೆ ಏನಾದ್ರು ಕೊಡ್ತೀನಿ"

"ಏನೂ ಬೇಡ ಆಂಟಿ, ತಿಂದೂ ತಿಂದೂ ಸಾಕಾಗಿದೆ"

"ಉಂಡೆ ಚಕ್ಕುಲಿಯೆಲ್ಲಾ ಯಾರು ಮಾಡಿ ಕೊಟ್ರು? ಮೊದಲೆಲ್ಲಾ ನಾನೇ ಮಾಡಿ ಕೊಡ್ತಿದ್ದೆ" ಗಂಡ ಹೆಂಡತಿ ಮುಖ ಮುಖ ನೋಡಿಕೊಂಡರು.

"ನೀವಾಗಿಯೇ ಕೇಳಿದ್ದು ಒಳ್ಳೇದಾಯ್ತು ಆಂಟಿ.. ಒಪ್ಪಿಕೊಂಡವರು ಆಗೊಲ್ಲ ಅಂತ ಕೈ ಆಡಿಸಿ ಬಿಟ್ಟರು. ನಿಮಗೆ ಬೇಸರವಿಲ್ಲದಿದ್ದರೆ ಮಾಡಿಕೊಡ್ತೀರಾ?"

"ನೀನು ಕೇಳಿದರೆ ಇಲ್ಲ ಅಂತೀನಾ ಭಾರ್ಗವ. ನಾನು ಮಾಡಿಕೊಡ್ತೀನಿ. ಏನೂ ಯೋಚಿಸ್ಬೇಡಿ. ಆದರೆ ಗಿರಿಜ ಏನಂತಾಳೋ?"

"ಅಮ್ಮ ಏನೂ ಅನ್ನದಿರುವ ಹಾಗೆ ನಾನು ನೋಡಿಕೊಳ್ತೀನಿ. ನೀವು ಸೋಮವಾರ ಬೆಳಿಗ್ಗೆಯೇ ನಮ್ಮ ಮನೆಗೆ ಬಂದು ಬಿಡಿ" ಆಕೆ ಕೊಟ್ಟ ತಿಂಡಿಯನ್ನು ತಿಂದು ಕಾಫಿಯನ್ನು ಕುಡಿದರು. ಆಕೆ ಕೊಟ್ಟ ಎಲೆ ಅಡಿಕೆ ಬಾಳೆಹಣ್ಣುಗಳನ್ನು ತೆಗೆದುಕೊಂಡು ಮನೆಗೆ ಹಿಂತಿರುಗಿದರು.

* * * * *

ಸೀಮಂತ ಅದ್ದೂರಿಯಾಗಿ ನೆರವೇರಿತ್ತು. ಈ ಗಳಿಗೆಯಲ್ಲಿ ಸಾವಿತ್ರಿ ಗಿರಿಜಮ್ಮ ಮತ್ತೆ ಸ್ನೇಹಿತೆಯರಾಗಿದ್ದರು. ಕಳೆದು ಹೋದವರು ಮತ್ತೆ ಸಿಕ್ಕಿದವರಂತೆ ಇಬ್ಬರೂ ಮಾತಿನಲ್ಲಿ ಮುಳುಗಿದ್ದರು. ಆರತಿ ಅಕ್ಷತೆಯ ಕಾರ್ಯಕ್ರಮ ಮುಗಿದಿತ್ತು.

ಆ ರಾತ್ರಿ ಗಿರಿಜಮ್ಮ ಹೇಮಾಳನ್ನು ತನ್ನ ಬಳಿಗೆ ಕರೆದು, ತನ್ನ ಬಳಿ ಇದ್ದ ಹೊಸ ಸೀರೆಯನ್ನು, ಒಡವೆಗಳನ್ನು ಅವಳಿಗೆ ಕೊಟ್ಟಳು. "ಇದನ್ನು ಉಟ್ಟು ತೊಟ್ಟು ಬಾ ಎಂದು ಕಳಿಸಿದಳು. ತಾನೇ ಬೆಳ್ಳಿಯ ಲೋಟಗಳಿಗೆ ಹಾಲನ್ನು ತುಂಬಿಸಿ ಕೊಟ್ಟಳು. ಇದು ನಿಮ್ಮಿಬ್ಬರಿಗೆ ನಾನು ಕೊಟ್ಟೆ ಅಂತ ನಿನ್ನ ಗಂಡಂಗೆ ಹೇಳು"

"ಅತ್ತೇ..."

"ಹೌದು ಹೇಮಾ.. ನೀವಿಬ್ರೂ ಇನ್ನು ಹತ್ತಿರವಾಗಿಲ್ಲ ಅಂತ ನಂಗೆ ಗೊತ್ತು. ಅವನು ಹಠವಾದಿ. ನಾನು ನಿನ್ನನ್ನು ಸೊಸೆ ಅಂತ ಸ್ವೀಕರಿಸದ ಹೊರತು, ಅವನು ನಿನ್ನನ್ನು ಸ್ವೀಕರಿಸುವುದಿಲ್ಲ. ನನ್ನಿಂದಾಗಿ ನೀನು ಬರಡು ಜೀವನ ನಡೆಸಬಾರದು. ನಾನು ಹಳೆಯದೆಲ್ಲವನ್ನು ಮರೆತಿದ್ದೇನೆ. ನಿಮ್ಮ ಹೊಸ ಬಾಳು ಹಸಿರಾಗಿರಲಿ" ಹೇಮಾ ಅವಳ ಕಾಲಿಗೆ ನಮಸ್ಕರಿಸಿದಳು.

* * * * *

ಹೊಸ ಸೀರೆಯನ್ನುಟ್ಟು, ಹೊಳೆಯುವ ಚಿನ್ನಾಭರಣಗಳನ್ನು ತೊಟ್ಟು, ಬೆಳ್ಳಿಯ ಲೋಟಗಳನ್ನು ಹಿಡಿದು ಬಂದ ಈ ಅಪ್ಸರೆ ಯಾರೆಂದು ಬೆರಗಾಗಿ ನೋಡಿದ ಸುರೇಶ.

"ನಾನ್ರೀ.. ಹೇಮಾ ಗುರುತು ಸಿಗಲಿಲ್ವಾ?"

"ಇದೇನೇ ನಿನ್ನ ಈ ಅವತಾರ?" ಎಂದು ಬಿಟ್ಟ., ಇಬ್ಬರಿಗೂ ತಕ್ಷಣ ಆ ಮೊದಲ ಘಟನೆ ನೆನಪಾಗಿತ್ತು. ಎದ್ದು ಬಂದು ಅವಳ ಕೈ ಹಿಡಿದ. "ಆ ದಿನ ನಿನಗೆ ನೆನಪಿದೆಯಾ ಹೇಮಾ?"

"ಅದನ್ನು ಮರೆಯೋಕೆ ಆಗುತ್ತಾ? ನನ್ನ ಆ ಸ್ಥಿತಿ ಹೇಗಿತ್ತು ಅಂತ ಹೇಗೆ ಹೇಳಲಿ? ನೀವು ಕೆಟ್ಟವರು"

"ನಾನು ಕೆಟ್ಟವನೇ ಇರಲಿ, ಮತ್ತೊಮ್ಮೆ ಆ ರೀತಿ ನಿನ್ನನ್ನು ನೋಡ್ಬೇಕು ಅಂತ ಆಸೆ ಆಗ್ತಿದೆ"

"ನಿಮ್ಮ ಆಸೆ ಆಸೆಯಾಗಿಯೇ ಉಳಿಯುತ್ತೆ. ನಾನೀಗ.. ಬೆಳೆದು ದೊಡ್ಡವಳಾಗಿದೀನಿ. ಮದುವೆಯಾಗಿರುವ ಹೆಂಗಸು ನಾನು"

"ಆ ಹೆಂಗಸಿನ ಗಂಡ ನಾನು. ಒಂದೇ ಒಂದು ಸಲ"

"ಛೀ... ನನಗೆ ನಾಚಿಕೆಯಾಗುತ್ತೆ. ಮೊದಲು ಈ ಹಾಲನ್ನು ಕುಡಿಯಿರಿ. ದೀಪ ಆರಿಸಿ ಮಲಗೋಣ"

"ಹಾಲು ದಿನಾ ರಾತ್ರಿ ಕುಡಿಯೋದೇ. ದೀಪವನ್ನಾರಿಸೋಕೆ ಏನು ಆತುರ?"

"ಇವತ್ತು ವಿಶೇಷವಾದ ದಿನ. ಈ ಹಾಲಿನ ಲೋಟಗಳನ್ನು ಸ್ವತಃ ನಿಮ್ಮ ತಾಯಿಯೇ ತುಂಬಿಸಿ ಕೊಟ್ಟಿದಾರೆ. ನಿನ್ನ ಗಂಡಂಗೆ ಹೇಳು ಅಂತ ಹೇಳಿದಾರೆ"

"ಆಂ.. ಏನಂದೇ... ಅಮ್ಮ ನಮ್ಮಿಬ್ಬರಿಗೆ ಅಂತ ಈ ಹಾಲನ್ನು ಕಳಿಸಿದಾಳಾ? ನಿಜ ಹೇಳ್ತಿದೀಯಾ ತಾನೇ. ಅಥವಾ ನನ್ನಾಸೆ ಹೆಚ್ಚಾಗಿ ಸುಳ್ಳು ಹೇಳ್ತಿದೀಯೋ?"

"ಛೀ.. ಸುಳ್ಯಾಕೆ ಹೇಳಲಿ? ಈ ಸೀರೆ, ಈ ಒಡವೆ ಎಲ್ಲವನ್ನು ನಿಮ್ಮಮ್ಮನೇ ಕೊಟ್ಟಿದ್ದು. ಅಲಂಕಾರ ಮಾಡ್ಕೊಂಡು ಕೋಣೆಗೆ ಹೋಗು ಅಂತ ಹೇಳಿ ಕಳಿಸಿದವರು ಅವರೇ. ಬೇಕಾದ್ರೆ ನೀವೇ ಹೋಗಿ ಕೇಳಿ"

"ನಿನ್ನ ಮೇಲೆ ನನಗೆ ನಂಬಿಕೆ ಇದೆ ಹೇಮಾ... ಈ ರಾತ್ರಿಗಾಗಿ ನಾವು ಎಷ್ಟೋ ರಾತ್ರಿ ಒಂಟಿಯಾಗಿ ಮಲಗಿದೀವಿ ಅಲ್ವಾ? ಈ ರಾತ್ರಿ ನಿಜಕ್ಕೂ ವಿಶೇಷವೇ. ಇಂದಿಗೆ ನಿನ್ನ ವನವಾಸ ಮುಗಿಯಿತು. ನನ್ನ ಉಪವಾಸ ಮುಗಿಯಿತು" ಎನ್ನುತ್ತಾ ಅವಳನ್ನು ಮಂಚದ ಬಳಿಗೆ ಕರೆದೊಯ್ದ. ಇಬ್ಬರೂ ಸವಿಯಾದ ಹಾಲನ್ನು ಕುಡಿದರು.

"ಹೇಮಾ.. ನೀನು ಇಷ್ಟು ಚೆನ್ನಾಗಿದೀಯ ಅಂತ ನನಗೆ ಗೊತ್ತಿರಲೇ ಇಲ್ಲ" ಅಂದ ಅವಳ ಮುಖದ ಮೇಲೆ ದೃಷ್ಟಿಯನ್ನಿಟ್ಟು.

"ನೀವು ಹೀಗೆ ನೋಡಿದ್ರೆ ನನಗೆ ನಾಚಿಕೆ ಆಗುತ್ತೆ"

"ನನ್ನ ಹತ್ರಾನೇ ನಿನಗೆ ನಾಚಿಕೇನಾ? ನನ್ನ ನಿನ್ನ ಸ್ನೇಹ ಎಷ್ಟು ಹಳೆಯದು? ಸಾವಿತ್ರಿ ಆಂಟಿಯ ಕೈ ಹಿಡಿದು, ಲಂಗದಲ್ಲೇ ಮೂಗನ್ನು ಒರೆಸಿಕೊಳ್ಳುತ್ತಾ ತಲೆಯನ್ನು ಕೆರೆದುಕೊಳ್ಳುತ್ತಾ ಬರುತ್ತಿದ್ದ ಹೇಮಾಳ ಮುಖ ನನಗೆ ಈಗಲೂ ನೆನಪಿದೆ. ಆದರೆ ನೀನು ಈಗ ತುಂಬಾ ಬದಲಾಗಿದೀಯ. ನನಗಾಗಿ ಕಾದಿರುವ ಮುಗ್ಧ ಚೆಲುವೆ ನೀನಾಗಿದೀಯ. ನಾನು ತುಂಬಾ ಅದೃಷ್ಟವಂತ"

"ಹೊಗಳಿಕೆ ಸಾಕು, ಈಗಾಗ್ಲೇ ಹೊತ್ತಾಗಿದೆ"

"ಹೌದು ಈಗಾಗಲೇ ಸಾಕಷ್ಟು ಸಮಯ ವ್ಯರ್ಥವಾಗಿದೆ" ಎನ್ನುತ್ತಾ ದೀಪವನ್ನಾರಿಸಿ ಅವಳನ್ನು ತನ್ನ ಬಳಿಗೆ ಎಳೆದುಕೊಂಡು ಆಲಂಗಿಸಿದ. ಅವಳು ಸಹಕರಿಸಿದಳು.

* * * * *

ಅರಳಿದ ಕೆಂದಾವರೆಯಂತೆ ಕೆಂಪಾಗಿದ್ದ ಹೇಮಾಳ ಮುಖವನ್ನು ಸುಶೀಲ ಕಂಡಳು. ಕಣ್ಣುಗಳು ಆಶ್ಚರ್ಯದಿಂದ ಅರಳಿದವು.

"ಏನೋ ವಿಶೇಷ ಕಳೆ ಬಂದಿದೆ ನಿನ್ನ ಮುಖಕ್ಕೆ. ನಿನ್ನ ಗಂಡ ವ್ರತ ಭಂಗ ಮಾಡಿಬಿಟ್ನಾ?" ಹೇಮಾ ನಾಚಿಕೆಯಿಂದ ಕತ್ತು ಬಾಗಿಸಿದಳು.

"ಅಂತೂ ನಿನ್ನ ಗಂಡಂಗೆ ನಿನ್ನ ಮೇಲೆ ದಯೆ ಬಂತು. ನಿನ್ನ ಒಂಟಿತನವನ್ನು ಅವನಿಂದ ನೋಡಲಾಗಲಿಲ್ಲವೋ, ಅಥವಾ ಅವನ ಒಂಟಿತನವನ್ನು ಭರಿಸಲಾಗಲಿಲ್ಲವೋ"

"ಹಾಗೇನಿಲ್ಲ ಅಕ್ಕಾ.. ನೆನ್ನೆ ರಾತ್ರಿ ಅತ್ತೆಯೇ ನನ್ನನ್ನು ಆಶೀರ್ವದಿಸಿ ಅವರ ಬಳಿಗೆ ಗಳಿಸಿ ಕೊಟ್ಟರು"

"ಆಂ... ಏನಂದೆ? ಈ ಸುದ್ದೀನ ನಾನು ಈಗಲೇ ನನ್ನ ಗಂಡಂಗೆ ಹೇಳ್ಬೇಕು"

"ಭಾವಂಗೆ ತಿಳಿಸ್ಬೇಡಿ ನಂಗೆ ನಾಚ್ಕೆ ಆಗುತ್ತೆ"

"ಇನ್ನು ನಾಚ್ಕೇನಾ? ಭಾವ ಬೇಸರ ಮಾಡ್ಕೊಂಡು ನಿನ್ನ ಗಂಡಂಗೆ ಬುದ್ದಿ ಹೇಳು ಅಂತ ಹೇಳ್ತಿದ್ರು. ಆ ಮಾತುಗಳನ್ನು ಅತ್ತೆ ಕೇಳಿಸ್ಕೊಂಡಿದಾರೆ. ಅದರ ಫಲವೇ ಇದು. ನನಗೆ ತುಂಬಾ ಸಂತೋಷವಾಗ್ತಿದೆ ಹೇಮಾ.. ಅವನಿನ್ನು ಮಲಗಿದಾನಾ? ಮಲಗಿರಲಿ ಬಿಡು. ಎಷ್ಟು ರಾತ್ರಿ ನಿದ್ದೆಯಿಲ್ಲದೇ ಕಾಲ ಕಳೆದಿದಾನೋ?"

"ನನ್ನನ್ನು ಮುಂದಿನ ವಾರ ಮಂಡ್ಯಕ್ಕೆ ಕರ್ಕೊಂಡು ಹೋಗ್ತಾರಂತೆ" ಸುಶೀಲಳ ಮುಖ ಸಪ್ಪಗಾಯಿತು.

"ನನ್ನ ಡೆಲಿವರಿಯ ಸಮಯಕ್ಕೆ ಬರ್ತೀಯಾ ತಾನೇ?"

"ನೀವು ಇರು ಅಂದ್ರೆ ನಾನು ಇದ್ದು ಬಿಡ್ತೀನಿ. ಅವರು ಇನ್ನೆರಡು ದಿನಗಳ ರಜ ಹಾಕಿದಾರೆ"

"ಬೇಡ ಹೇಮಾ, ನೀನು ಅವನ ಜೊತೆ ಹೋಗು ಅದೇ ಸರಿ"

"ಸುಶೀಲ ಭಾರ್ಗವನಿಗೆ ವಿಷಯವನ್ನು ತಿಳಿಸಿದಳು. ಸಧ್ಯ ಒಂದು ಭಾರಿ ಸಮಸ್ಯೆ ಬಗೆಹರಿಯಿತು. ಈ ಸುರೇಶ ಎಂಥಾ ಅವಿವೇಕಿ. ಇಂಥಾ ಪ್ರತಿಜ್ಞೇನಾ ಮಾಡೋದು? ಇವನಿಗೆ ಹೆಂಡತಿಯ ಭಾವನೆಗಳ ಮೇಲೆ ಆಟ ಆಡೋಕೆ ಯಾವ ಅಧಿಕಾರವಿದೆ?"

"ಹೋಗಲಿ ಬಿಡಿ, ಹೇಮಾಳ ಕಷ್ಟ ತೀರಿತಲ್ಲ. ಆದರೆ ಅವಳು ಮಂಡ್ಯಕ್ಕೆ ಹೊರಟು ಹೋಗ್ತಿದಾಳೆ. ನನಗೆ, ಒಬ್ಬಳಿಗೇ ತುಂಬಾ ಬೇಸರವಾಗುತ್ತೆ"

"ಮಂಡ್ಯ ಎಷ್ಟು ದೂರ ಇದೆ? ವಾರಕ್ಕೊಂದು ಸಾರಿ ಕರ್ಕೊಂಡು ಬರ್ತಾನೆ" ಎಂದು ಹೆಂಡತಿಗೆ ಸಮಾಧಾನ ಹೇಳಿದ.

* * * * *

ಸಾವಿತ್ರಿ ಎಲ್ಲರನ್ನು ಔತಣಕ್ಕೆ ಕರೆದು ಹಬ್ಬದ ಅಡಿಗೆಯನ್ನು ಮಾಡಿ ಬಡಿಸಿದಳು. ಹೇಮಂಗೆ ಸೀರೆಯನ್ನು ಉಡುಗೊರೆಯಾಗಿ ಕೊಟ್ಟು, ಉಡಿಯನ್ನು ತುಂಬಿದಳು. ಸುಶೀಲಂಗೆ ತಿಂಡಿಗಳನ್ನು ಮಾಡಿಕೊಟ್ಟು ಎಲೆ ಅಡಿಕೆ ಹಣ್ಣುಗಳನ್ನು ಕೊಟ್ಟು ಹರಸಿದಳು.

ಅಳಿಯಂಗೆ ಪಂಚೆ, ಶಲ್ಯವನ್ನು ಓದಿಸಿದಳು. ಗಿರಿಜಮ್ಮ ಸಾವಿತ್ರಿಯ ಸಂಭ್ರಮವನ್ನು ನೋಡುತ್ತಿದ್ದರು.

ಕಾಲೇಜಿಗೆ ಹೋಗಿದ್ದ ಸೀಮಾ ಹಿಂತಿರುಗಿ ಬಂದು ಅಚ್ಚರಿಯಿಂದ ಎಲ್ಲರನ್ನು ನೋಡಿ ಹೇಮಾಳ ಬಳಿ ಬಂದು ಕುಳಿತಳು. ಸುರೇಶ ಅವಳನ್ನೇ ಅಚ್ಚರಿಯಿಂದ ನೋಡಿದ. ಸೀಮಾ ಹೇಮಾಳ ಪಡಿಯಚ್ಚು. ತಮ್ಮ ಮನೆಗೆ ಆಗಾಗ್ಗೆ ತಾಯಿಯ ಕೈ ಹಿಡಿದು ಬರುತ್ತಿದ್ದ ಹೇಮಾಳನ್ನು ಕಂಡಂತೆಯೇ ಆಗಿತ್ತು. ಅದನ್ನೇ ಹೆಂಡತಿಗೆ ಹೇಳಿದ.

"ಹದಿನೈದು ವರ್ಷಗಳ ಹಿಂದೆ ನೀನು ಹೀಗೇ ಇದ್ದೆ" ಹೇಮಾ ತಂಗಿಯ ಗಲ್ಲವನ್ನು ಹಿಡಿದೆತ್ತಿ ಮುಗುಳ್ನಕ್ಕಳು.

"ನನಗೆ ಇನ್ನೊಬ್ಬ ಮಗ ಇದ್ದಿದ್ದರೆ. ನಿನ್ನ ಈ ಮಗಳೂ ನನಗೆ ಸೊಸೆಯಾಗುತ್ತಿದ್ದಳು" ಗಿರಿಜಮ್ಮ ನುಡಿದಾಗ. ಸಾವಿತ್ರಿಯ ಮುಖ ಬಣ್ಣಗೆಟ್ಟಿತು. ಎಲ್ಲರೂ ಸುಮ್ಮನೆ ನಕ್ಕರು. ಸಾವಿತ್ರಿ ನಗಲಿಲ್ಲ. ಗಂಡು ಮಕ್ಕಳ ತಾಯಿಯೆಂಬ ಜಂಭ ಅವಳಿಗೆ. ಅದನ್ನು ಮಾತು ಮಾತುಗಳಲ್ಲಿ ಆಡಿ ತೋರಿದ್ದಳು. ಜತೆಗೆ ನಮ್ಮ ಬಡತನವನ್ನು ಎತ್ತಿ ಎತ್ತಿ ಆಡುವ ಅವಕಾಶವನ್ನು ಕಳೆದುಕೊಳ್ಳುತ್ತಿರಲಿಲ್ಲ. ಬೇಸರಗೊಂಡು, ಸ್ನೇಹಿತೆಯಿಂದ ದೂರವಾಗಿದ್ದಳು. ಆ ಮಾತಿಗೆ ಪುಷ್ಟಿ ಕೊಡುವಂತೆ ಹೇಮಾ ಸುರೇಶನನ್ನು ಒಲಿದು ತನ್ನ ಮಾತನ್ನು ಮೀರಿ ಅಲ್ಲಿಗೆ ಹೋದಳು. ಇವಳ ಕುಟುಕು ಮಾತಿಗೆ ಮತ್ತು ಕಾರಣ ಸಿಕ್ಕಿತು. ಹೇಮಾ ತಾಯಿಯ ವ್ಯಥೆಯ ಕಾರಣವನ್ನು ಊಹಿಸಿದ್ದೇ ಬೇರೆ ರೀತಿಯಲ್ಲಿ.

ಎಲ್ಲರೂ ಅಲ್ಲಿಂದ ಹೊರಟಿದ್ದರು. ಎರಡು ದಿನಗಳ ನಂತರ ಹೇಮಾ ಗಂಡನೊಂದಿಗೆ ಮಂಡ್ಯಕ್ಕೆ ಹೊರಟಿದ್ದಳು. ಸುಶೀಲ ಅವಳನ್ನು ತಬ್ಬಿಕೊಂಡು ಹಾರ್ದಿಕವಾಗಿ ಬೀಳ್ಕೊಟ್ಟಿದ್ದಳು.

* * * * *

ಡಾಕ್ಟರು ಕೊಟ್ಟ ಅವಧಿಯ ದಿನಾಂಕಕ್ಕೆ ಎರಡು ದಿನಕ್ಕೆ ಮೊದಲೇ ಸುಶೀಲಾಳಿಗೆ ಹೆರಿಗೆ ನೋವು ಪ್ರಾರಂಭವಾಗಿತ್ತು. ನರ್ಸಿಂಗ್ ಹೋಂಗೆ ಸೇರಿಸಿದ್ದರು. ಸಿಸೇರಿಯನ್ ಅಪರೇಷನ್ ಮಾಡಬೇಕಾಗಿ ಬಂತು. ಅವಳಿ ಮಕ್ಕಳು ಹುಟ್ಟಿದ್ದು ಎಲ್ಲರಿಗೂ ಸಂಭ್ರಮವೋ ಸಂಭ್ರಮ. ಫೋನು ಬಂದ ಕೂಡಲೇ ಸುರೇಶ, ಹೇಮಾ ಧಾವಿಸಿ ಬಂದರು.

ಎರಡು ತೊಟ್ಟಿಲುಗಳಲ್ಲಿ ಮಲಗಿದ್ದ ಮಕ್ಕಳನ್ನು ಹೇಮಾ ಕಣ್ಣರಳಿಸಿ ನೋಡಿದಳು. ಒಂದು ಗಂಡು ಮಗು; ಮತ್ತೊಂದು ಹೆಣ್ಣು ಮಗು.

"ಅಕ್ಕಾ... ಅವಳಿ ಮಕ್ಕಳು ಹುಟ್ಟುತ್ತವೆ ಅಂತ ನಿಮಗೆ ಗೊತ್ತಿತ್ತಾ?"

"ಈಗ ವಾರದ ಹಿಂದೆ ಗೊತ್ತಾಯಿತು. ನನಗೆ ನಂಬಿಕೆಯೇ ಇರಲಿಲ್ಲ. ನಾನು ತುಂಬಾ ಬಳಲಿ ಹೋಗಿದ್ದೆ"

"ಮತ್ಯಾಕೆ ನಮಗೆ ಹೇಳಲಿಲ್ಲ"

"ಅವಳು ಯಾರಿಗೂ ಹೇಳಲಿಲ್ಲ. ಭಾರ್ಗವ ಹೇಳೋದು ಬೇಡ ಅಂತ ಅಂದ್ನಂತೆ"

"ಯಾಕೋ...? ಎಂಥಾ ಛಾನ್ಸು. ಒಂದೇ ಏಟಿಗೆ ಎರಡು ಹಕ್ಕಿ ಅನ್ನೋ ಹಾಗೆ ಒಂದೇ ಬಾರಿಗೆ ಎರಡು ಮಕ್ಕಳು. ಒಟ್ಟಿಗೇ ಬೆಳೆಸಬಹುದು, ಒಟ್ಟಿಗೇ ಓದಿಸಬಹುದು. ಒಟ್ಟಿಗೇ ಮದುವೆ ಮಾಡಬಹುದು"

"ಒಂದು ಮಗೂನ ನಿನಗೆ ಕೊಟ್ಟು ಬಿಡ್ತೀನಿ ಹೇಮಾ... ನೀನು ಸಾಕ್ತೀಯಾ?" ಸುಶೀಲ ಹೇಳಿದಾಗ ಗಿರಿಜಮ್ಮ ಗದರಿದಳು.

"ಹೀಗೆಲ್ಲಾ ಮಾತಾಡ್ಬೇಡ ಸುಶೀಲಾ. ಅವರವರು ಹೆತ್ತ ಮಕ್ಕಳನ್ನು ಅವರೇ ಸಾಕಬೇಕು, ಅಲ್ವಾ ಸಾವಿತ್ರಿ. ನಾನು ಹೇಳಿದ್ದು ಸರಿ ತಾನೇ?"

"ಹೌದು ಸುಶೀಲ... ಗಿರಿಜ ಹೇಳುವ ಮಾತು ಸರಿ. ನಿನ್ನ ಮಕ್ಕಳು ಬೆಳೆದು ದೊಡ್ಡವರಾಗುವವರೆಗೂ ನಾನು ಸಹಾಯ ಮಾಡ್ತೀನಿ"

"ಸಾವಿತ್ರೀ..."

"ಹೌದು ಗಿರಿಜಾ... ನಾನು ನಿನ್ನ ಸೊಸೆಗೆ ಬಾಣಂತನ ಮಾಡ್ತೀನಿ. ಮಕ್ಕಳಿಗೆ ನೀರು ಹಾಕ್ತೀನಿ. ಇಂಥಾ ಸಮಯದಲ್ಲಿ ಒಬ್ಬರಿಗೊಬ್ಬರು ಸಹಾಯಕರಾಗಬೇಕು"

"ಹೌದು ಸಾವಿತ್ರಿ, ನಿನ್ನ ಸಹಾಯವಿಲ್ಲದಿದ್ದರೆ ನಾನು ಏನೂ ಮಾಡಲಾರೆ. ಸುಶೀಲಳ ತಾಯಿಯ ಆರೋಗ್ಯ ಸರಿ ಇಲ್ಲ. ನಿನ್ನನ್ನು ಕೇಳಲು ಹಿಂಜರಿದಿದ್ದೆ. ಈಗ ನೀನೇ ಹೇಳಿದ್ದು ನನಗೆ ಭುಜಬಲ ಬಂದಂತಾಯಿತು"

"ನೀವೆಲ್ಲಾ ಮನೆಗೆ ಹೋಗಿ, ನಾನು ಇಲ್ಲಿ ಬಾಣಂತಿಯ ಜತೇಲಿರ್ತೀನಿ"

"ಆಪ್ತ ಸ್ನೇಹಿತೆ ಎಂದರೆ ನೀನೇ. ಯಾವಾಗಲೂ ನಮ್ಮ ಸಹಾಯಕ್ಕೆ ಒದಗಿ ಬರ್ತೀಯ. ನೀನು ಬದುಕಿಯೇ ಇಲ್ಲ ಅಂತ ಅಂದುಕೊಂಡಿದ್ದೆ. ಯಾರೋ ನೀನು ಸತ್ತು ಹೋಗಿದೀಯ ಅಂತ ಹೇಳಿದ ನೆನಪು"

"ಇರಬಹುದು, ನಾನು ನಿನ್ನ ಭಾಗಕ್ಕೆ ಸತ್ತು ಹೋಗಿದ್ದೆ. ಈಗ ಈ ಮಕ್ಕಳಿಗೋಸ್ಕರ ಮತ್ತೆ ಬದುಕಿ ಬಂದಿದೀನಿ"

"ಛೀ.. ನೀನು ಹೀಗೆಲ್ಲಾ ಮಾತಾಡಬೇಡ. ನೀನು ನೂರು ಕಾಲ ಬದುಕಬೇಕು" ಎಂದು ಹೇಳಿ ಗಿರಿಜಾ ವಾರ್ಡಿನಿಂದ ಆಚೆ ಬಂದಿದ್ದಳು.

"ಆಂಟಿ ನಿಮಗೆ ಎಷ್ಟು ಕೃತಜ್ಞತೆ ಹೇಳಿದರೂ ಸಾಲದು"

"ಇರಲಿ ಬಿಡಮ್ಮ. ನೀನು ನನ್ನ ಹೇಮಾಳ ಅದೃಷ್ಟವೇ ಬದಲಾಗುವಂತೆ ಮಾಡಿದವಳು. ನಿನಗೆ ಸಹಾಯ ಮಾಡಿದರೆ, ದೇವರು ಮೆಚ್ತಾನೆ. ನನ್ನ ಮಗಳಿಗೂ ಮುದ್ದುಗಾರನಂಥ ಮಕ್ಕಳು ಹುಟ್ಟುತ್ತವೆ" ಹೇಮಾ ಸುರೇಶನ ಕಡೆ ನೋಡಿದಳು. ಅವನ ತುಂಟ ನಗುವಿಗೆ ಮನ ಸೋತಳು. ಕದಪುಗಳು ಸೇಬಿನ ಹಣ್ಣಿನಂತೆ ಕೆಂಪಾಗಿದ್ದವು.

* *

## ಎಲ... ಎಲಾ... ಸೀರೆಯೇ...

"ನಿಮ್ಮ ತಮ್ಮನ ಮನೆ ಮದುವೆಗೆ ನಾನು ಬರುಲ್ಲ. ನೀವು ಹೋಗ್ಬನ್ನಿ" ಲಕ್ಷ್ಮಿ ಮುಖ ಊದಿಸಿಕೊಂಡು ಹೇಳಿದಾಗ, ಗುಂಡಣ್ಣ ಕೆರಳಿದ.

"ಈಗೇನಾಯ್ತು? ಮನೇ ಮದುವೇಗೇ ಬರುಲ್ಲ ಅಂದ್ರೇನು?"

"ಒಂದೇ ಮನೇಯವರ ತರಹ ನಾವೆಲ್ಲಿದೀವಿ? ನಮಗೂ, ಅವರಿಗೂ ಎಷ್ಟು ವ್ಯತ್ಯಾಸ?"

"ಏನೇ ವ್ಯತ್ಯಾಸಗಳಿದ್ದರೂ ಇಂತಹ ಸಮಾರಂಭಗಳಿಗೆ ಅದನ್ನೆಲ್ಲ ಮರೆತು ಹೋಗಬೇಕು" ಗುಂಡಣ್ಣ ಬುದ್ಧಿವಾದ ಹೇಳಿದ.

"ಇಂಥ ಸಮಾರಂಭಗಳಲ್ಲಿ ನಮ್ಮ ನಮ್ಮ ವ್ಯತ್ಯಾಸ ಇನ್ನು ಜಾಸ್ತಿಯಾಗುತ್ತೆ. ಅದಕ್ಕೇ ನನಗಿಷ್ಟವಿಲ್ಲ. ನಮ್ಮ ಪಾಡಿಗೆ ನಾವು ಹಾಯಾಗಿರೋಣ. ನಾನು ಬರದಿದ್ರೆ ಮದುವೆಯೇನೂ ನಿಂತು ಹೋಗುಲ್ಲ" ಗುಂಡಣ್ಣ ಖಾರವಾಗಿ ಅವಳನ್ನೇ ನೋಡಿದ.

"ನೀನು ದೊಡ್ಡೋಳು. ನೀನೇ ಹೀಗೆಲ್ಲಾ ಮಾತಾಡಿದ್ರೆ, ಸೀತಾ ಹಾಗಾಡುವುದರಲ್ಲಿ ತಪ್ಪೇನಿದೆ?"

"ಸದಾ ನನ್ನದೇ ತಪ್ಪು ಅನ್ನೋ ತರಹ ಮಾತಾಡ್ತೀರಲ್ಲ. ನಮ್ಮ ಮನೆ ಮದುವೆಗೆ ಅವರುಗಳು ಬಂದೇ ಇರಲಿಲ್ಲ. ಅದು ತಪ್ಪು ಅಂತ ಅನ್ನಿಸಲಿಲ್ವಾ ನಿಮಗೆ?"

"ಅವರು ತಪ್ಪು ಮಾಡಿದರೆ, ಅವರಿಗೆ ತಿಳುವಳಿಕೆ ಹೇಳೋ ಆಗಿರಬೇಕು ನಾವು. ಅದು ಬಿಟ್ಟು, ಅವರು ಬರಲಿಲ್ಲ ಅಂತ, ಅದನ್ನೇ ದೊಡ್ಡದು ಮಾಡಿ ನಾನು ಬರುಲ್ಲ ಅದೂ ಇದೂ ಅಂತಂದ್ರೆ, ಅದು ನಿನ್ನ ಸಣ್ಣತನವನ್ನು ತೋರಿಸುತ್ತೆ" ಗುಂಡಣ್ಣ ನಿಷ್ಠುರವಾಗಿ ನುಡಿದ.

"ಬರೀ ಅದಲ್ಲ, ನನ್ನ ಹತ್ತಿರ ಒಳ್ಳೇ ಸೀರೆಗಳಿಲ್ಲ. ಬೆಂಗಳೂರಿನಲ್ಲಿ ನಡೆಯೋ ಮದುವೆಗೆ ಇಷ್ಟೊಂದು ಜನ ಬಂದಿರ್ತಾರೆ. ಅದೇ ಹಳೇ ಹಳೇ ಸೀರೇನ ಉಟ್ಕೊಳ್ಳೋಕೆ ನನಗಿಷ್ಟವಿಲ್ಲ"

ಗುಂಡಣ್ಣ ಕಿಸಕ್ಕನೆ ನಕ್ಕು ಬಿಟ್ಟ. "ಅಲ್ಲಿ ಯಾರೂ ನಿನ್ನ ಸೀರೇನ ನೋಡೋಕೆ ಬರುಲ್ಲ. ಗಂಡು ಹೆಣ್ಣನ್ನು ನೋಡಿ, ಆಶೀರ್ವಾದ ಮಾಡೋಕೆ ಬಂದಿರ್ತಾರೆ. ಎರಡು ದಿನದ ಮದುವೆಗೆ, ನಿನಗೆಷ್ಟು ಸೀರೆ ಬೇಕು? ನಮಗೆ ಗಂಡಸರಿಗೆ, ಒಂದು

ಸೆಟ್ ಚೆನ್ನಾಗಿರೋ ಬಟ್ಟೆ ಆದರೆ ಸಾಕು. ನಿನಗೆ ಎರಡು ಜೊತೆ ಸೀರೆ, ರವಿಕೆ ಇದ್ದರೆ ಸಾಲದಾ?"

"ಎರಡಲ್ಲ, ನಾಲ್ಕು ಜೊತೆ ಸೀರೆ, ರವಿಕೆ ಇದ್ದರೂ ಸಾಲದು ಮದುವೆ ಮುಂಜಿಗಳಿಗೆ. ಅದನ್ನೇ ಮತ್ತೆ ಮತ್ತೆ ಉಟ್ಟರೆ, ಒಂಥರಾ ನೋಡಿ ನಗ್ತಾರೆ. ನಿಮಗದು ಅರ್ಥವಾಗುಲ್ಲ"

"ನಕ್ಕರೆ ನಗಲಿ, ನೀನೇನು ಚಿಕ್ಕೋಳಲ್ಲ. ಅಜ್ಜಿಯಾಗುವ ವಯಸ್ಸಾಗಿದೆ. ಇಂಥ ಸಣ್ಣ ಮಾತುಗಳಿಗೆ ಬೆಲೆ ಕೊಡಬಾರದು"

"ನಿಮಗೆ ಅದೆಲ್ಲ ಅರ್ಥವಾಗುಲ್ಲ, ಅಂತ ಅಂದ್ನಲ್ಲ"

"ನನಗೇಕೆ ಅರ್ಥವಾಗುಲ್ಲ? ನನ್ನ ತಮ್ಮನ ಮನೇ ಮದುವೆ ಅಂತ ಹೀಗೆಲ್ಲಾ ಮಾತಾಡ್ತಿದೀಯ. ಅದೇ ನಿಮ್ಮಣ್ಣನ ಮನೇ ಮದುವೆ ಆಗಿದ್ದಿದ್ರೆ, ಹೀಗೆ ನೆವ ಹೇಳ್ತಿದ್ದೆಯಾ?" ಹಂಗಿಸಿದ.

"ನಮ್ಮಣ್ಣನಿಗೆ ಇರೋಳು ನಾನೊಬ್ಬಳೇ ತಂಗಿ. ನನಗೂ ಒಳ್ಳೇ ಸೀರೆಯನ್ನು ಉಡುಗೊರೆಯನ್ನಾಗಿ ಕೊಡುತ್ತಾನೆ"

"ನನ್ನ ತಮ್ಮನಿಗೆ ನಾನೊಬ್ಬನೇ ಅಣ್ಣ. ಅವನಿಗೆ, ಅವನ ಹೆಂಡತಿಗೆ, ಮಗನಿಗೆ ಏನಾದರೂ, ಒಳ್ಳೇ ಉಡುಗೊರೆ ಕೊಡಬೇಕು. ಹಾಗೇ ನವ ವಧು, ಹಸೆ ಮಣೆ ಮೇಲೆ ಕೂತಿರ್ತಾಳೆ. ಆ ಹುಡುಗೀನೂ ಏನಾದ್ರೂ ಕೊಡಲೇ ಬೇಕು"

"ಏನಾದ್ರೂ ಮಾಡ್ಕೊಳ್ಳಿ. ಅದು ನಿಮಗೆ ಸೇರಿದ್ದು"

"ನಿಂದ್ಯಾವತ್ತೂ ಇಷ್ಟೇ ಆಯ್ತು. ನನ್ನ ತಮ್ಮನ ಮನೆಯವರನ್ನು ಕಂಡರೆ ಉದಾಸೀನ ನಿನಗೆ"

"ಅವರುಗಳು ಹೇಗೆ ಮಾಡ್ತಾರೋ... ನಾನೂ ಹಾಗೇ ಮಾಡ್ತೀನಿ"

"ನಿನ್ನಿಷ್ಟ, ನಿನ್ನನ್ನಂತೂ ನಾನು ತಿದ್ದುಕ್ಕಾಗುಲ್ಲ" ಗುಂಡಣ್ಣ ಒರಟಾಗಿ ನುಡಿದು ಅಲ್ಲಿಂದ ಎದ್ದು ಹೋದ.

ಸಾಯಂಕಾಲದ ಹೊತ್ತಿಗೆ, ಮೈದುನ, ವಾರಗಿತ್ತಿ ಆಮಂತ್ರಣ ಪತ್ರಿಕೆಯೊಂದಿಗೆ ಬಂದರು. ಕಾಫಿ, ತಿಂಡಿಯ ಉಪಚಾರ ನಡೆಯಿತು. ನಂತರ ಮೈದುನ ನುಡಿದ.

"ಇದು ನಮ್ಮ ಮನೇಲಿ ನಡೆಯುತ್ತಿರುವ ಮೊದಲನೇ ಮದುವೆ. ನೀವು ಖಂಡಿತಾ ಬರಲೇ ಬೇಕು ಅತ್ತಿಗೆ. ನೀವೇ ಈ ಮನೆಯ ಹಿರಿಯೋರು. ಬಂದು ಆಶೀರ್ವಾದ ಮಾಡಲೇಬೇಕು"

"ಈಗ ಹೀಗೆ ಹೇಳ್ತೀಯಲ್ಲ ಕಿಟ್ಟಿ, ನಮ್ಮ ಮನೆ ಮದುವೆಯ ಸಮಯದಲ್ಲಿ ಈ ಸಂಬಂಧ ಎಲ್ಲಾ ಎಲ್ಲಿ ಹೋಗಿತ್ತು?"

ಆ ಅಸಮಾಧಾನ ಇನ್ನು ಇಟ್ಕೊಂಡಿದೀರಾ ಅತ್ತಿಗೆಮ್ಮ?" ಈಗ ಸೀತಾ ಕೇಳಿದಳು.

"ನಾವು ಹಿರಿಯೋರು, ಎಲ್ಲಾ ಕ್ಷಮಿಸಬೇಕು. ನೀವು ಕಿರಿಯೋರು ಮತ್ತೆ ಮತ್ತೆ ತಪ್ಪು ಮಾಡುತ್ತಿರಲೇ ಬೇಕು ಇದು ನ್ಯಾಯಾನಾ?"

"ಇನ್ನು ಮುಂದೆ ಇಂಥ ತಪ್ಪುಗಳನ್ನು ನಾವು ಮಾಡುಲ್ಲ ಅತ್ತೆಗೆಮ್ಮ. ನಿಮ್ಮ ಗಂಡು ಮಕ್ಕಳ ಮದುವೆಗೆ ತಪ್ಪದೇ ಬರ್ತೀವಿ" ಇಬ್ಬರೂ ಒಟ್ಟಿಗೇ ನುಡಿದರು. ಲಕ್ಷ್ಮಿ ಮಾತಾಡಲಿಲ್ಲ.

"ಇಲ್ಲಿಂದ ದಿಬ್ಬಣ ಹೋಗೋಕೆ. ಬಸ್ಸು ಗೊತ್ತು ಮಾಡಿದೀವಿ. ಭಾನುವಾರ ಬೆಳಿಗ್ಗೆ ಹತ್ತು ಗಂಟೆಯ ಹೊತ್ತಿಗೆ ನಮ್ಮ ಮನೆಗೆ ಬಂದು ಬಿಡಿ" ಗುಂಡಣ್ಣ ಆಗಲಿ ಎಂದು ತಲೆಯಾಡಿಸಿದ. ಲಕ್ಷ್ಮಿ ಮಾತಾಡದೇ, ವಾರಗಿತ್ತಿಗೆ ಕುಂಕುಮ ಕೊಟ್ಟಳು. ಇಬ್ಬರೂ ಹೊರಟು ಹೋದರು.

ಮೈದುನ ವಾರಗಿತ್ತಿಯವರು, ತಾನೇ ಬಂದು ಸ್ವಯಂ ಆಹ್ವಾನ ಪತ್ರಿಕೆ ಕೊಟ್ಟು ಹೋಗಿದಾರೆ. ಈಗ ಅವರಿಗೆ ಅರ್ಥವಾಗಿರಬಹುದು, ಮನೆ ಮನೆಯವರು ಸೇರದಿದ್ದರೆ ಸಮಾರಂಭಕ್ಕೆ ಕಳೆ ಇರುಲ್ಲ ಅಂತ. ಈಗ ನಾನು ಹೋಗದಿದ್ದರೆ, ನನ್ನನ್ನೇ ಎಲ್ಲರೂ ದೂಷಿಸುತ್ತಾರೆ. ಮುಂಚಿನ ಹಾಗೆ ಹೇಳಲು ಯಾವ ನೆವವೂ ಇಲ್ಲ. ಹೆಣ್ಣು ಮಕ್ಕಳು ಇದ್ದಾಗ, ಅವರನ್ನು ಬಿಟ್ಟು ಬರುಕ್ಕಾಗುಲ್ಲ ಅಂತ ಹೇಳಬಹುದಾಗಿತ್ತು. ಈಗ ನಾವಿಬ್ಬರೇ ಇಲ್ಲಿ. ಗಂಡು ಹುಡುಗರು, ಬೇರೆ ಊರಿನಲ್ಲಿ ಓದುತ್ತಿದ್ದಾರೆ. ಅಲ್ಲಿಂದಲೇ ಮದುವೆಗೆ ಬನ್ನಿ ಅಂತ ಹೇಳಬಹುದು. ಸೀರೆ, ರವಿಕೆಗಳನ್ನು ಜೋಡಿಸಿಟ್ಟುಕೊಳ್ಳಬೇಕು. ಇಸ್ತ್ರಿ ಮಾಡಿಕೊಡಲು, ಹೆಣ್ಣು ಮಕ್ಕಳೂ ಮನೆಯಲ್ಲಿಲ್ಲ. ಬೀರು ಬಾಗಿಲು ತೆಗೆದು, ಸೀರೆಗಳನ್ನು ನೋಡಿದಳು.

ಈ ಸೀರೆ ಭಾರತಿಯ ಅತ್ತೆ ಮನೆಯವರು ಕೊಟ್ಟಿದ್ದು. ಸೀರೆ ಬಣ್ಣವೇನೋ ಚೆನ್ನಾಗಿದೆ. ಆದರೆ ಅಂಚು, ಅಂಚಿನ ಜರಿ ತುಂಬಾ ಚಿಕ್ಕದು. ಎಂಟು ಗಜದ ಸೀರೆಯನ್ನು ಯಾಕೆ ಕೊಟ್ಟರೋ? ಇದೇ ದುಡ್ಡಿಗೆ, ಆರು ಗಜದ ಸೀರೆ, ತಂದಿದ್ದರೇ... ಇನ್ನು ಸ್ವಲ್ಪ ಭಾರಿಯಾಗಿರುತ್ತಿತ್ತು. ಇದೇನಿದ್ರು ಹಬ್ಬ ಹುಣ್ಣಿಮೇಲಿ, ಮಡಿಗೆ ಬರುತ್ತೆ... ಕಚ್ಚೆ ಹಾಕಿ ಉಡೋಕೆ, ಸೀರೆಯನ್ನು ಅತ್ತ ಸರಿಸಿದಳು.

ಈ ಸೀರೆಯನ್ನು ಆರತಿಯ ಅತ್ತೆ ಅದೇನು ಅಂತ ಆರಿಸಿದರೋ ಎಂಥಾ ಬಣ್ಣ ಚೆನ್ನ ಅಂತಲಾದ್ರೂ ಗೊತ್ತಾಗಬೇಡ್ವಾ? ಈ ಬಣ್ಣವೋ... ಈ ಚೌಕಳಿಯೋ... ಒಳ್ಳೇ ಹಾವಿನ ಪೊರೆಯ ಹಾಗೆ ಕಾಣುತ್ತೆ. ಇದನ್ನು ಬೇರೆ ಯಾರಿಗಾದ್ರೂ ಕೊಟ್ಟು ಬಿಡಬೇಕು. ಸೀತಂಗೇ ಕೊಡಬಹುದು, ಆದರೆ ನನಗಿಷ್ಟವಿಲ್ಲ. ನನ್ನ ಬೀಗಿತ್ತಿ ನನಗೆ ಕೊಟ್ಟ ಸೀರೆ, ನಾನು ಉಡಲಿ, ಬಿಡಲಿ ಅದು ನನ್ನ ಹತ್ತಿರವೇ ಇರಲಿ" ಎನ್ನುತ್ತಾ ಮತ್ತೆ ಒಳಗಿಟ್ಟಳು.

"ಇದು ನನ್ನ ಅಣ್ಣ ಕೊಟ್ಟಿದ್ದು. ಬಾಯಲ್ಲಿ ಮಾತ್ರ, ನಾನೊಬ್ಬಳೇ ತಂಗಿ. ಹಾಗೆ ಹೀಗೆ ಅಂತ ಹೇಳ್ತಾನೆ. ಸೀರೆ ಗೀರೆ ಕೊಡುವಾಗ, ಅವನ ಕೈ ನಡೆಯೋಲ್ಲ. ಎಲ್ಲಾ ಅತ್ತಿಗೇದೇ ಕಾರು ಬಾರು. ಒಂದು ಚೂರೂ ಹೀನಾಯವಿಲ್ಲದೇ ನನಗಿಂತಹ

ಸೀರೆ ಕೊಟ್ಟಿದ್ದಾಳಲ್ಲ. ಅವಳ ಮನೆಯ ಮದುವೇಲಿ, ಅವಳಿಗೇ ಈ ಸೀರೆಯನ್ನು ವಾಪಸ್ಸು ಕೊಟ್ಟು ಬಿಡಬೇಕು" ಆ ಸೀರೆಯನ್ನು ಹಿಂದಕ್ಕೆ ತಳ್ಳಿದಳು.

"ಇದೇ ಸಮಯ... ನಾನೇಕೆ ನನಗಿಷ್ಟವಾದ ಒಂದೆರಡು ಹೊಸ ರೇಶಿಮೆ ಸೀರೆಗಳನ್ನು ಕೊಳ್ಳಬಾರದು? ಮದುವೆಯಾಗಿ ಮೂವತ್ತೈದು ವರ್ಷವಾಯಿತು. ನನ್ನ ಗಂಡ ನನಗೆ ಅಂತ ಒಂದೇ ಒಂದು ಒಳ್ಳೆಯ ರೇಶಿಮೆ ಸೀರೆಯನ್ನು ತಂದು ಕೊಟ್ಟಿಲ್ಲ. ಯಾವಾಗ ನೋಡಿದರೂ, ಸಂತೆಯಿಂದ ಸೀರೆ ತರೋ ಹಾಗೇ ಒಂದೇ ತರಹದ ಅಂಚು ಸೆರಗು ಇರುವ ನಾಲ್ಕಾರು ಸೀರೆಗಳನ್ನು ತರೋದು. ಇಷ್ಟವಿರಲಿ ಬಿಡಲಿ, ಅದನ್ನೇ ವರ್ಷವೆಲ್ಲಾ ಉಡಬೇಕು. ಈಗ ನೋಡಿಯೇ ಬಿಡ್ತೀನಿ. ತಮ್ಮನ ಮನೆಯ ಮದುವೆಗೆ ಅಂತ ಕೇಳಿದ್ರೆ ಸೀರೆ ತೆಗೆಸಿ ಕೊಡಬಹುದೇನೋ"

ಗುಂಡಣ್ಣನನ್ನು ಒಪ್ಪಿಸುವುದು ಕಷ್ಟವೇ ಆಯಿತು. "ಬೀರುವಿನಲ್ಲಿ ಅಷ್ಟೊಂದು ಸೀರೆಗಳು ಚೆನ್ನಾಗಿವೆ, ಎಲ್ಲಾ ಹೊಸದಾಗಿವೆ. ಈಗೇಕೆ ಮತ್ತೆ ಹೊಸ ಸೀರೆ?"

"ನಮ್ಮ ಮನೆಯ ಮದುವೇಲಿ ಸಹ ನನಗೆ ಅಂತ ಸೀರೆ ತರಲಿಲ್ಲ. ನಾನೂ ಹೋಗಲಿ, ಖರ್ಚೇ ಸಾಕಷ್ಟಿರುತ್ತೆ ಅಂತ ಸುಮ್ಮನಾದೆ. ಈಗ ನನಗೆ ಎರಡು ರೇಶಿಮೆ ಸೀರೆ. ಅದೂ ಭಾರಿ ಸೀರೆ ಬೇಕೇ ಬೇಕು"

"ಈಗ? ಈಗ್ಯಾಕೆ? ಈಗ ಬೇಕಾದಷ್ಟು ಖರ್ಚಿದೆ ನನಗೆ"

"ಅವರಿವರಿಗೆ ಖರ್ಚು ಮಾಡೋಕೆ ಹಣವಿದೆ. ನನಗೆ ನನಗೆ ಅಂತ ಖರ್ಚು ಮಾಡುವಾಗ.. ಬೇರೆ ಖರ್ಚಿನ ನೆವ ಹೇಳ್ತೀರಿ. ಈಗ ನನಗೆ ಹೊಸ ಸೀರೆಗಳನ್ನು ತೆಗೆಸಿಕೊಟ್ಟರೆ ಮಾತ್ರ ಮದುವೆಗೆ ಬರ್ತೀನಿ. ಇಲ್ಲದಿದ್ರೆ ನೀವು ಒಬ್ಬರೇ ಹೋಗಿ" ಅವಳು ಮುಸುಕೆಳೆದು ಮಲಗಿದಳು.

ಮಾರನೇ ದಿನ ಗುಂಡಣ್ಣ ಮೂರು ರೇಶಿಮೆ ಸೀರೆಯನ್ನು ಪ್ಯಾಕ್ ಮಾಡಿಸಿಕೊಂಡು ಬಂದ. ಲಕ್ಷ್ಮಿಗೆ ನಿರಾಶೆಯಾದರೂ ಅಂತೂ ಹೊಸ ಸೀರೆಗಳು ಬಂದವು ಎಂದುಕೊಂಡಳು. "ಇದರಲ್ಲಿ ಒಂದು ನಿನಗೆ, ಇನ್ನೊಂದನ್ನು ಸೀತಂಗೆ ಕೊಡೋಣ, ಏನಂತೀಯಾ?"

"ಸೀತಂಗೆ ಈಗ್ಯಾಕೆ? ನನಗೆಂದೂ ಅವರು ಒಂದು ನೂಲಿನೆಳೆ ಕೊಟ್ಟಿಲ್ಲ"

"ಅವಳು ಕೊಟ್ಟಿಲ್ಲ ಅಂತ ನೀನೂ ಹಾಗೇ ಆಡಬೇಡ. ಕಿಟ್ಟಿಗೆ ಪಂಚೆ ತಂದಿದೀನಿ. ಮದುಮಕ್ಕಳಿಗೆ ಕ್ಯಾಷ್ ಕೊಟ್ಟು ಬಿಡೋಣ"

"ಖರ್ಚು ಹೆಚ್ಚಾಗುತ್ತಲ್ಲ"

"ಅದಕ್ಕೆ ನೀನೇಕೆ ತಲೆ ಕೆಡಿಸಿ ಕೊಳ್ತೀಯ?" ಗಂಡ ಹಾಗೆ ಹೇಳಿದರೂ ಅವಳಿಗೆ ಖುಷಿಯಾಗಲಿಲ್ಲ. ಅವಳ ಜಾಯಮಾನವೇ ಅಷ್ಟು. ಇಲ್ಲದಿದ್ದಾಗ ಕೊರಗುವುದು, ಇದ್ದಾಗ ಖುಷಿ ಪಡದೇ ಚಿಂತಿಸುವುದು. ಹೇಗೂ ಮೂರು ಸೀರೆಗಳಿವೆ, ಸೀತಂಗೆ ಕೊಟ್ಟೆ ಕೊಡ್ತಾರೆ. ತಾನು ಈಗ ಎರಡು ಸೀರೆಗಳನ್ನು ಇಟ್ಟುಕೊಳ್ಳಬೇಕೆಂದು ನಿರ್ಧರಿಸಿದಳು.

ಹತ್ತು ಗಂಟೆಯ ಹೊತ್ತಿಗೆ, ದಿಬ್ಬಣದವರೆಲ್ಲ ಕಿಟ್ಟಿಂಯ ಮನೆಯಲ್ಲಿ ಜಮಾಯಿಸಿದರು. ಎಷ್ಟು ಹೊತ್ತಾದರೂ ಬಸ್ಸು ಬರಲಿಲ್ಲ. ಯಾರೋ ಬಂದು ಹೇಳಿದ್ದರು, ಗೊತ್ತು ಮಾಡಿದ್ದ ಬಸ್ಸು ಕೆಟ್ಟು ಹೋಗಿದೆಯಂತೆ. ಆದ್ದರಿಂದ ಬೆಂಗಳೂರಿಗೆ ಹೋಗುವ ಸರ್ಕಾರಿ ಬಸ್ಸಿನಲ್ಲೇ ಸೀಟುಗಳನ್ನು ಹೊಂದಿಸಿ ಕೊಡ್ತಾರಂತೆ. ಈಗ ನಾವೆಲ್ಲಾ ಬಸ್‌ಸ್ಟ್ಯಾಂಡಿಗೆ ಹೋಗಬೇಕು" ಅಲ್ಲಿದ್ದವರ ಮುಖ ಕಳಾಹೀನವಾಯಿತು. ನಮ್ಮದೇ ಸ್ವಂತ ಬಸ್ಸಿನಲ್ಲಿ ದಿಬ್ಬಣದವರು, ಮದುವೆ ಮಂಟಪವನ್ನು ಸೇರುವ ಮಜಾ ಎಲ್ಲಿ? ಇತರೇ ಪ್ರಯಾಣಿಕರೊಂದಿಗೆ ಪ್ರಯಾಣ ಮಾಡುವುದು ಎಂದರೇ...

ಎಲ್ಲರೂ ಆಟೋ ಹಿಡಿದು ಬಸ್‌ಸ್ಟ್ಯಾಂಡ್ ತಲುಪಿದರು. ಬೆಂಗಳೂರಿಗೆ ಹೊರಡಲಿದ್ದ ಎರಡು ಬಸ್‌ಗಳಲ್ಲಿ ಈ ದಿಬ್ಬಣದವರಿಗೆ ಸೀಟುಗಳನ್ನು ಹೊಂದಿಸಿ ಕೊಟ್ಟರು. ಮದುವೆಯ ಕಾಲ, ಎಲ್ಲಾ ಬಸ್‌ಗಳಲ್ಲೂ ರಶ್ಶು. ಸೂಟ್‌ಕೇಸು, ಹೋಲ್ಡಾಲ್‌ಗಳನ್ನು ಟಾಪ್ ಮೇಲೆ ಹಾಕಿದರು. ಲಕ್ಷ್ಮಿಗೆ ತನ್ನ ಸೂಟ್‌ಕೇಸನ್ನು ತನ್ನ ಬಳಿಯೇ ಇಟ್ಟುಕೊಳ್ಳುವುದು ಸಾಧ್ಯವಾಗಲಿಲ್ಲ. ಗಂಡಿನ, ಗಂಡಿನ ತಂದೆ ತಾಯಿಯ ಸೂಟ್‌ಕೇಸುಗಳನ್ನು ಮಾತ್ರ ಒಳಗೇ ಇಟ್ಟರು. ಬೆಲೆ ಬಾಳುವ ಸೀರೆ ಒಡವೆಗಳಿರುತ್ತವೆಂದು...

ಭದ್ರಾವತಿಯಿಂದ, ಬೆಂಗಳೂರಿಗೆ ಎಷ್ಟೇ ವೇಗವಾಗಿ ಬಸ್ಸು ಓಡಿದರೂ, ಸುಮಾರು ಆರು ಗಂಟೆಗಳ ಕಾಲ ಬೇಕೇ ಬೇಕು. ಇದು ನಾನ್‌ಸ್ಟಾಪ್ ಬಸ್ ಅಲ್ಲ. ಅರಸೀಕೆರೆ, ತಿಪಟೂರು, ತುಮಕೂರುಗಳಲ್ಲಿ ಇಳಿಯುವವರಿದ್ದರು. ಕೆಲವರು ಹತ್ತಿದರು ಅಲ್ಲದೇ ಇವರುಗಳು ಹತ್ತಿದ ಬಸ್ಸು ಗೋಕರ್ಣದಿಂದ ಬೆಂಗಳೂರಿಗೆ ಹೊರಟಿದ್ದ ಬಸ್ಸು ಕೆಲವು ಯಾತ್ರಿಕರೂ ಇದ್ದರು.

ಬೆಂಗಳೂರನ್ನು ಬಸ್ಸು ತಲುಪಿದಾಗ ಸಣ್ಣಗೆ ಮಳೆ ಸುರಿಯುತ್ತಿತ್ತು. ಜತೆಗೆ ಕತ್ತಲಾಗುತ್ತಿತ್ತು. ಟಾಪ್ ಮೇಲಿರುವ ಸೂಟ್‌ಕೇಸು, ಹಾಸಿಗೆ ನೆನೆದು ಹೋಗಿದ್ದರೆ ಏನು ಮಾಡುವುದು ಎಂದು ಲಕ್ಷ್ಮಿ ಚಿಂತಿಸುತ್ತಿದ್ದಳು. ಬೆಂಗಳೂರು ಮೊದಲೇ ಚಳಿಯ ಊರು. ಮದುವೆ ಮನೆಯಲ್ಲಿ ಎಲ್ಲಿ ಜಾಗ ಸಿಗುತ್ತದೋ, ರೂಮುಗಳಿರುತ್ತವೋ, ಇಲ್ಲವೋ...

ಬಸ್‌ಸ್ಟ್ಯಾಂಡಿನಲ್ಲಿ ಹೆಣ್ಣಿನ ಕಡೆಯವರು ಯಾರೋ ಬಂದಿದ್ದರು. ಎಲ್ಲರೂ ಇಳಿದರು ಎಲ್ಲರ ಲಗೇಜನ್ನು ಇಳಿಸಿದರು. ಎಲ್ಲರೂ ಅವರವರ ಸೂಟ್‌ಕೇಸುಗಳನ್ನು ನೋಡಿ ಇಳಿಸಿಕೊಂಡರು. ಗುಂಡಣ್ಣನೇ ಜವಾಬ್ದಾರಿ ಹೊತ್ತಿದ್ದರೂ, ಲಕ್ಷ್ಮಿಯ ಆತಂಕ ಕಡಿಮೆ ಆಗಿರಲಿಲ್ಲ.

ದಿಬ್ಬಣದವರೆಲ್ಲಾ ಮದುವೆಯ ಛತ್ರವನ್ನು ತಲುಪಿದರು. ಮೊದಲ ಕಾಫಿಯೊಂದಿಗೆ ಎಲ್ಲರ ಆಯಾಸ ಪರಿಹಾರವಾದಂತಾಗಿತ್ತು. ನಂತರ ಎಲ್ಲರೂ ಮುಖ ತೊಳೆದು ಸಿದ್ಧರಾಗಲು, ಅವರವರ ಲಗೇಜುಗಳ ಕಡೆ ಗಮನ ಹರಿಸಿದರು. ಲಕ್ಷ್ಮಿ ಸೂಟ್‌ಕೇಸಿನ ಲಾಕ್ ತಿರುಗಿಸಲು ನೋಡಿದಳು, ಆದರೆ ಆಗಲಿಲ್ಲ. ಗಂಡನನ್ನು ಸಹಾಯಕ್ಕೆ ಕರೆದಳು.

"ನೀನು ಲಾಕ್ ಹಾಕೇ ಇಲ್ಲ. ಬೀಗದ ಕೈಯನ್ನು ತಿರುಗಿಸಿದ್ದೇ ತಿರುಗಿಸಿದ್ದು" ಎಂದು ಹೆಂಡತಿಯನ್ನು ಮೂದಲಿಸುತ್ತಾ ಸೂಟ್‌ಕೇಸನ್ನು ತೆರೆದ. ಲಕ್ಷ್ಮಿಗೆ ಏನೋ ಅನುಮಾನ. ಅವಳು ಬೀಗ ಹಾಕಿದ್ದಳು. ಸೂಟ್‌ಕೇಸನ್ನು ತೆರೆಯುತ್ತಿದ್ದಂತೆ ಕಿಟಾರನೆ ಕಿರುಚಿದಳು. ಅಲ್ಲಿದ್ದವರೆಲ್ಲಾ ಏನಾಯ್ತು? ಏನಾಯ್ತು? ಎನ್ನುತ್ತಾ ಜಮಾಯಿಸಿದರು.

ಗುಂಡಣ್ಣ ಉದ್ರೇಕಗೊಂಡಿದ್ದ. ಲಕ್ಷ್ಮಿ ಅಳುತ್ತಿದ್ದಳು. "ಸೂಟ್‌ಕೇಸು ಅದಲು ಬದಲಾಗಿದೆ. ಯಾರೋ ನಮ್ಮ ಸೂಟ್‌ಕೇಸನ್ನು ಹೊಡೆದು ಇದನ್ನು ಬಿಟ್ಟು ಹೋಗಿದ್ದಾರೆ" ಗುಂಡಣ್ಣ ನುಡಿದ. ಕೆಲವರಿಗೆ ಕೆಡುಕೆನಿಸಿತು. ಕೆಲವರಿಗೆ ಮೋಜೆನಿಸಿತು. ಲಕ್ಷ್ಮಿ ಕಂಗೆಟ್ಟು ಹೋಗಿದ್ದಳು. ಯಾರ ಲಗೇಜೂ ಏನೂ ಆಗಿಲ್ಲ. ತನ್ನ ಸೂಟ್‌ಕೇಸೇ ಅದಲು ಬದಲಾಗಬೇಕೇ? ಮದುವೆಗೆ ಬರಲೇ ಇಷ್ಟವಿರಲಿಲ್ಲ. ಬಲವಂತವಾಗಿ ಹೊರಟದ್ದಾಗಿತ್ತು. ಹೊಸ ಸೀರೆಗಳನ್ನು ತಗೊಂಡಾಗಿತ್ತು. ಈಗ ನೋಡಿದರೆ, ಹೀಗಾಗಿದೆ. ಹೊಸ ಸೀರೆಗಳ ವಿಷಯವಿರಲಿ, ಮದುವೆ ಮನೆಯಲ್ಲಿ ಉಡಲು ಸುಮಾರಾದ ಒಂದು ಸೀರೆ ಸಹ ಇಲ್ಲ. ಯಾರು ಹೀಗೆ ಮಾಡಿರಬಹುದು? ಈಗ ತನ್ನ ಗತಿ? ತಲೆ ತಗ್ಗಿಸುವಂತಾಗಿತ್ತು.

"ಗುಂಡಣ್ಣ" ಬಸ್‌ಸ್ಟ್ಯಾಂಡಿಗೆ ಹೋಗಿ ಬರ್ತೀನಿ" ಎಂದು ಹೊರಟ. ಲಕ್ಷ್ಮಿ ಅಳುತ್ತಾ ಒಂದು ಮೂಲೆಯಲ್ಲಿ ಕುಳಿತಳು.

"ಅತ್ತಿಗೆಮ್ಮ... ಈಗ ಅಳ್ತಾ ಕೂತರೆ ಏನು ಪ್ರಯೋಜನ? ಗುಂಡಣ್ಣ ಬಸ್‌ಸ್ಟ್ಯಾಂಡಿಗೆ ಹೋಗಿದಾನೆ. ಕಂಪ್ಲೇಂಟ್ ಕೊಡ್ತಾನೆ. ನಿಮ್ಮ ಸೂಟ್‌ಕೇಸ್ ಸಿಕ್ಕರೂ ಸಿಗಬಹುದು" ಮೈದುನ ಸಮಾಧಾನ ಹೇಳಿದ.

ಸೀತ, ತನ್ನ ಸೀರೆಯೊಂದನ್ನು ತಂದು ಲಕ್ಷ್ಮಿಗೆ ಕೊಟ್ಟಳು. "ಈ ಸೀರೆಯನ್ನು ಉಟ್ಟು ಸಿದ್ಧವಾಗಿ ಅತ್ತಿಗೆಮ್ಮ. ವರಪೂಜೆಗೆ ಹೊತ್ತಾಗ್ತಿದೆ" ಲಕ್ಷ್ಮಿ ಮನಸ್ಸಿಲ್ಲದ ಮನಸ್ಸಿನಿಂದ ಸಿದ್ಧಳಾದಳು. ಮನಸ್ಸು ಕೆಟ್ಟು ಹೋಗಿತ್ತು. ಮದುವೆ ಮನೆಗೆ ಬಂದರೂ, ಖುಷಿ ಇಲ್ಲವಾಯ್ತು. ಈಗ ನೋಡಿದರೆ, ಸೀತಳ ಯಾವುದೋ ಸೀರೆ, ಅದೇ ಹಳೇ ರವಿಕೆ, ತನ್ನ ಹೊಸಸೀರೆಗಳು, ತಾನೇ ಕಷ್ಟಪಟ್ಟು ಹೊಲಿದ ರವಿಕೆಗಳು. ಯಾರು ಕದ್ದರೋ ನನ್ನ ಸೂಟ್‌ಕೇಸೇ ಅವರ ಕಣ್ಣೀಗೆ ಬೀಳಬೇಕೇ? ಕದ್ದವರು ವಾಪಸ್ಸು ಕೊಡ್ತಾರ್ಯೇ? ಬೆಲೆ ಬಾಳುವ ಸೀರೆಗಳನ್ನು ವಾಪಸ್ಸು ಕೊಡುವ ಮೂರ್ಖರು ಯಾರು ಇರುತ್ತಾರೆ? ಅಂತೂ ಮುಖವೆತ್ತಿ ತಿರುಗದಂತಾಯ್ತು.

ಕಲಾಪಗಳೆಲ್ಲ ಮುಗಿದು ಊಟಕ್ಕೆ ಕೂರುವ ಸಮಯವಾಗುತ್ತಾ ಬಂದಿತ್ತು. ಅಷ್ಟರಲ್ಲಿ ಮದುವೆಗೆ ಬಂದಿದ್ದವರಲ್ಲಿ ಮುಕ್ಕಾಲು ಪಾಲು ಜನರಿಗೆ ಸೂಟ್‌ಕೇಸ್ ಕಳುವಾದ ವಿಚಾರ ತಿಳಿದಿತ್ತು. ಒಬ್ಬೊಬ್ಬರು ಒಂದೊಂದು ತರಹ ಮಾತಾಡುತ್ತಿದ್ದರು. ತಮಗಾದ ಅನುಭವ, ತಾವು ಕೇಳಿದ ವಿಷಯಗಳನ್ನು ಚರ್ಚಿಸುತ್ತಾ ತಮ್ಮ ತಮ್ಮಲ್ಲೇ ಆಡುತ್ತಿದ್ದುದನ್ನು ಲಕ್ಷ್ಮಿ ಆಲಿಸುತ್ತಾ ತನ್ನಲ್ಲೇ ವ್ಯಥೆಗೊಂಡಿದ್ದಳು.

ಬಸ್‌ಸ್ಟ್ಯಾಂಡ್‌ನಿಂದ ಗಂಡ ಇನ್ನು ವಾಪಸ್ಸಾಗಿಲ್ಲ. ಎಷ್ಟು ದೂರವೋ ಏನೋ, ಊಟ ತಿಂಡಿ ಇಲ್ಲ. ಪರವೂರಿನಲ್ಲಿ ಪರದೇಶಿಯಂತೆ ತಿರುಗಾಡುತ್ತಿರಬಹುದು. ಹೀಗೇ ಕಳೆಯಬೇಕೇ? ಅಷ್ಟರಲ್ಲಿ ಗುಂಡಣ್ಣ ವಾಪಸ್ಸಾಗಿದ್ದ. ಲಕ್ಷ್ಮಿಯೊಡನೆ ಹೇಳಿದ,

"ನಾನು ಕಂಪ್ಲೆಂಟ್ ಕೊಟ್ಟು ಬಂದಿದೀನಿ. ನಮ್ಮ ಸೂಟ್‌ಕೇಸ್ ಸಿಕ್ಕಿದವರೂ ಒಂದು ಕಂಪ್ಲೆಂಟ್ ಕೊಟ್ಟರೆ? ನಮ್ಮ ವಸ್ತು ನಮಗೆ ಸಿಗುತ್ತದೆ"

"ನನಗೆ ಅನುಮಾನ. ಕಳೆದು ಹೋದದ್ದು ಸಿಗೋದು ಅಂದ್ರೆ ತಮಾಷೇನಾ? ಯಾರಿರಬಹುದು? ಅವರೇ ತಂದು ಕೊಡೋದು ಸುಳ್ಳು"

"ನಾವು ಹತ್ತಿದ್ದ ಬಸ್ಸು ಗೋಕರ್ಣದಿಂದ ಬಂದಿದ್ದು. ಗೋಕರ್ಣದ ಯಾತ್ರಿಕರು ಇದ್ದರು. ಅವರ ಲಗೇಜು ನಮ್ಮ ಲಗೇಜು ಅದಲು ಬದಲಾಗಿರಬಹುದು. ಅದರಲ್ಲೇನಿತ್ತು ಅಂತ ಸರಿಯಾಗಿ ನೋಡಿದ್ಯಾ? ಏನಾದರೂ ಡೈರಿ ಇದ್ದು ಅಡ್ರೆಸ್ ಸಿಕ್ಕಿದರೆ?"

"ಕದ್ದವರು ಅಡ್ರೆಸ್ ಯಾಕೆ ಬಿಡ್ತಾರೆ? ಅದರಲ್ಲಿ ಇದ್ದದ್ದು ಒಂದೆರಡು ಒದ್ದೆ ಟವೆಲ್ಲು. ಒಂದು ಪ್ಲಾಸ್ಟಿಕ್ ಚೀಲದಲ್ಲಿ ಆರಿಸಿದ ನುಣ್ಣನೆಯ ಕಲ್ಲುಗಳು. ಎತ್ತುಕ್ಕೆ ಆಗದ ಹಾಗೆ ಭಾರ ಅಷ್ಟೇ"

"ಹಾಗಾದರೆ ಯಾರೋ ಯಾತ್ರಿಕರದ್ದೇ ಇರಬೇಕು. ತೀರ್ಥಕ್ಷೇತ್ರಕ್ಕೆ ಹೋಗಿ ಬಂದವರು ನಮ್ಮ ಪದಾರ್ಥಾನ ನಮಗೆ ಖಂಡಿತಾ ವಾಪಸ್ಸು ತಲುಪಿಸೇ ತಲುಪಿಸ್ತಾರೆ" ಗುಂಡಣ್ಣ ನುಡಿದಾಗ ಲಕ್ಷ್ಮಿ ಮುಖ ಸೊಟ್ಟಗೆ ಮಾಡಿದಳು.

"ಯಾವಾಗ? ಮದುವೆ ಮುಗಿದ ಮೇಲೆ ಸಿಕ್ಕರೇನು ಪ್ರಯೋಜನ? ಕಾಡಿ ಬೇಡಿ ಹೊಸ ಸೀರೆ ತೆಗೆಸಿಕೊಂಡೆ. ಮದುವೆಗೆ ಉಡಲು ಇಲ್ಲವಾಯ್ತು. ಆಮೇಲೆ ನನಗ್ಯಾಕೆ ಆ ಸೀರೆ? ವಾಪಸ್ಸು ಕೊಟ್ಟು ಬಿಡಿ"

"ಅದನ್ನೆಲ್ಲ ಆಮೇಲೆ ಯೋಚಿಸೋಣ. ಈಗ ಸುಮ್ಮನಿರು" ಗುಂಡಣ್ಣ ಗದರಿದ. ಅವನಿಗೂ ಬೇಸರವಾಗಿತ್ತು. ಆಯಾಸವೂ ಆಗಿತ್ತು.

ಮಾರನೇ ದಿನ ಧಾರೆ ಸಮಾರಂಭ. ಎಲ್ಲರೂ ಅವರವರ ಸಂಭ್ರಮಗಳಲ್ಲಿ ಮುಳುಗಿದ್ದರು. ಲಕ್ಷ್ಮಿ ಯಥಾ ಪ್ರಕಾರ ಸೀತಳ ಇನ್ನೊಂದು ಸುಮಾರಾದ ಸೀರೆಯನ್ನು ಉಟ್ಟು ಅನ್ಯಮನಸ್ಕಳಾಗಿ ಒಂದೆಡೆ ಕುಳಿತಿದ್ದಳು. ಸಮೀಪದಲ್ಲಿ ಕುಳಿತಿದ್ದ ಇಬ್ಬರು ಹೆಂಗಸರು, ಅವಳ ವಿಷಯವನ್ನೇ ಕುರಿತು ಮಾತಾಡಿಕೊಳ್ಳುತ್ತಿದ್ದರು. ಅದನ್ನೇ ಆಲಿಸುತ್ತಿದ್ದ ಹುಡುಗಿಯೊಬ್ಬಳು ಎದ್ದು ಲಕ್ಷ್ಮಿಯ ಬಳಿಗೆ ಬಂದಳು.

"ನೀವು ಭದ್ರಾವತಿಯಿಂದ ಬಂದ್ರಾ?" ಕೇಳಿದಳು.

"ಹುಂ... ಯಾಕೆ? ನೀನ್ಯಾರು?"

"ನಾನು ಮದುವೆ ಹುಡುಗಿಯ ಸ್ನೇಹಿತೆ. ನಿಮ್ಮ ಲಗೇಜು ಕಳೆದು ಹೋಗಿದೆ ಅಂತ ಕೇಳಿದೆ ಸಿಕ್ತಾ?"

"ಇಲ್ಲ, ಸಿಕ್ಕಿಲ್ಲ. ಕಂಪ್ಲೆಂಟ್ ಕೊಟ್ಟಿದಾರೆ"

"ನಮ್ಮ ಮನೆ ಔಟ್ ಹೌಸಿನಲ್ಲಿ ಬಾಡಿಗೆಗೆ ಇರೋರ ಮನೆಗೆ ಒಬ್ಬರು ಗೋಕರ್ಣದಿಂದ ಬಂದರು. ಅವರು ಬಂದ ಬಸ್ಸಿನಲ್ಲಿ ಒಂದು ಮದುವೆ ಪಾರ್ಟಿಯವರೂ ಬಂದರಂತೆ. ಅವರೂ ತಮ್ಮ ಸೂಟ್‌ಕೇಸ್ ಕಳೆದುಹೋಯ್ತು ಅಂತ ಹೇಳಿದ್ರಂತೆ. ಅವರು ನಮ್ಮ ತಾಯಿಗೆ ಹೇಳಿದ್ರಂತೆ"

ಲಕ್ಷ್ಮಿ ಚುರುಕಾದಳು... "ಹೌದಾ? ನಾನು ಈಗಲೇ ನಮ್ಮ ಯಜಮಾನರನ್ನು ನಿಮ್ಮ ಮನೆಗೆ ಕಳಿಸ್ತೀನಿ. ಬದಲಾದ ಸೂಟ್‌ಕೇಸು ಅದೇ ಇದ್ದರೂ ಇರಬಹುದು"

"ಹಾಗೇ ಮಾಡಿ... ಊಟವಾದ ಮೇಲೆ ನಾನು ಮನೆಗೆ ಹೋಗ್ತೀನಿ"

ದೂರದಲ್ಲಿ ಕೂತಿದ್ದ ಗುಂಡಣ್ಣನನ್ನು ಕರೆದು, ಲಕ್ಷ್ಮಿ ಆ ಹುಡುಗಿ ಹೇಳಿದ್ದನ್ನು ಹೇಳಿದಳು. ಗುಂಡಣ್ಣನ ಮುಖ ಮೊರದಗಲವಾಯಿತು.

ಸಮಾರಂಭ ಮುಗಿದು ಊಟವಾಗುವುದನ್ನೇ ಕಾದಿದ್ದವರಂತೆ, ಗುಂಡಣ್ಣ ಲಕ್ಷ್ಮಿ ಇಬ್ಬರೂ ಆ ಸೂಟ್‌ಕೇಸಿನೊಂದಿಗೆ ಆ ಹುಡುಗಿಯ ಜತೆ ಅವರ ಮನೆಗೆ ಹೋದರು. ಆ ಹುಡುಗಿಯ ತಾಯಿ ಎಲ್ಲಾ ವಿಷಯವನ್ನು ತಿಳಿದುಕೊಂಡು, "ನೆನ್ನೇನೇ ಗೊತ್ತಾಗಿದ್ದಿದ್ರೆ ಚೆನ್ನಾಗಿತ್ತು. ಅವರು ಬೆಳಿಗ್ಗೆ ತಮ್ಮ ಊರಿಗೆ ವಾಪಸ್ಸು ಹೊರಟು ಹೋದ್ರಂತೆ" ಎಂದಾಗ ಲಕ್ಷ್ಮಿ ನಿರಾಸೆಯಿಂದ ಕುಗ್ಗಿದಳು. ಆದರೂ ಉಗುಳು ನುಂಗುತ್ತಾ ಕೇಳಿದಳು.

"ಅವರು ನಮ್ಮ ಸೂಟ್‌ಕೇಸನ್ನು ಬಿಟ್ಟು ಹೋಗಿದ್ರೆ... ತಗೊಂಡು ಹೋಗ್ತೀವಿ. ಅದರಲ್ಲಿ ರೇಶಿಮೆ ಸೀರೆಗಳಿದ್ದವು"

"ಏನೋ ನಂಗೊತ್ತಿಲ್ಲ. ತಡೀರಿ ಅವರನ್ನೇ ಕರೀತೀನಿ" ಎನ್ನುತ್ತಾ ಹಿಂದುಗಡೆ ಮನೆಯವರನ್ನು ಕರೆಸಿದಳು. ಆಕೆ ಬಂದರು, ಆಕೆಗೆ ಮತ್ತೊಮ್ಮೆ ಎಲ್ಲಾ ಹೇಳಿಯಾಯಿತು.

"ಅವರು ತಮ್ಮ ಜೊತೆ ಆ ಸೂಟ್‌ಕೇಸನ್ನು ತೆಗೆದುಕೊಂಡೇ ಹೋದರು. ಆದರೆ ಅವರ ಅಡ್ರೆಸ್ ಕೊಟ್ಟು ಹೋಗಿದಾರೆ. ಅವರು ಬಸ್‌ಸ್ಟ್ಯಾಂಡ್‌ಗೆ ಹೋಗಿ, ಅಲ್ಲಿಯೂ ಆಫೀಸಿನಲ್ಲಿ ಕಂಪ್ಲೇಟ್ ಕೊಟ್ಟು ಬಂದಿದಾರಂತೆ"

ಗುಂಡಣ್ಣನಿಗೆ ನಿರಾಳವೆನಿಸಿತು. ಯಾರೋ ಜನ ಒಳ್ಳೆಯವರೇ. ಹೇಗೂ ನಮ್ಮ ವಸ್ತು ನಮಗೆ ಸಿಗುತ್ತದೆ. ಆದರೆ ತಡವಾಗಬಹುದು ಎಂದುಕೊಂಡು ವಿಳಾಸವನ್ನು ಕೇಳಿ ಪಡೆದ.

"ಅವರು ಈ ಊರಿನವರಲ್ಲ, ಆಂಧ್ರಪ್ರದೇಶದ 'ಕಡಪಾ' ದವರು. ಅವರ ಮಗನೂ, ನಮ್ಮ ಅಳಿಯನೂ ಸಹೋದ್ಯೋಗಿಗಳು ಹೈದರಾಬಾದಿನಲ್ಲಿ. ಆ ಪರಿಚಯದ ಮೇಲೆ, ಒಂದು ರಾತ್ರಿ ನಮ್ಮಲ್ಲಿ ತಂಗಿದ್ದರು. ಬೆಳಿಗ್ಗೆ ಹೈದರಾಬಾದಿನ ಬಸ್ಸು ಹತ್ತಿದರು. ಅಲ್ಲಿ ಒಂದು ರಾತ್ರಿ ಇದ್ದು ಮಾರನೇ ದಿನ ಕಡಪಾಕ್ಕೆ ವಾಪಸ್ಸು ಬರುತ್ತಾರಂತೆ"

ಕೈಗೆ ಸಿಕ್ಕ ತುತ್ತು ಬಾಯಿಗೆ ಇಲ್ಲವಾಯಿತು ಎನಿಸಿತ್ತು ಲಕ್ಷ್ಮಿಗೆ. ಈ ಹುಡುಗಿ ನೆನ್ನೆಯೇ ನಮಗೆ ಈ ವಿಷಯವನ್ನು ತಿಳಿಸಿದ್ದರೇ..

"ನೆನ್ನೆ ನಾನು ಮದುವೆಗೆ ಬಂದಿರಲಿಲ್ಲ. ಅಲ್ಲದೇ ಈ ವಿಷಯ ನಮಗೆ ತಿಳಿದದ್ದು ಇವತ್ತೇ" ಆ ಹುಡುಗಿ ಇವಳ ಮನಸ್ಸನ್ನು ಓದಿದವಳಂತೆ ನುಡಿದಳು.

'ಕಡಪಾ'ದ ವಿಳಾಸವನ್ನು ಹಿಡಿದು, ಗುಂಡಣ್ಣ ಮತ್ತು ಲಕ್ಷ್ಮಿ ಛತ್ರಕ್ಕೆ ಹಿಂತಿರುಗಿದರು. ಎಲ್ಲರೂ ಸುತ್ತುವರೆದರು. ಮಾರನೇ ದಿನ ದಿಬ್ಬಣ ವಾಪಸ್ಸು ಹೊರಟಾಗ ಗುಂಡಣ್ಣ ಕಿಟ್ಟಿಗೆ ಹೇಳಿದ,

"ನಿನ್ನ ಅತ್ತಿಗೇನ ಮನೆಗೆ ತಲುಪಿಸಿ ಬಿಡು. ನಾನು 'ಕಡಪಾ'ಕ್ಕೆ ಹೋಗಿ ಬರ್ತೀನಿ" ಗುಂಡಣ್ಣ ಆ ಸೂಟ್‌ಕೇಸಿನೊಂದಿಗೆ ಬೆಂಗಳೂರಿನ ಬಸ್‌ಸ್ಟ್ಯಾಂಡಿನಲ್ಲಿ 'ಕಡಪಾ'ಕ್ಕೆ ಹೋಗುವ ಬಸ್ಸಿಗಾಗಿ ಕಾದು ಕುಳಿತ.

'ಕಡಪಾ' ಆಂಧ್ರ ಪ್ರದೇಶದ ಒಂದು ಸಣ್ಣ ಊರು. ಅಲ್ಲಿಗೆ ಹೋಗಲು ಸೀದಾ ಬಸ್ಸುಗಳಿರಲಿಲ್ಲ. ಸೇಲಂಗೆ ಹೋಗಿ ಅಲ್ಲಿಂದ ಹೋಗುವ ಮಾರ್ಗ ಹತ್ತಿರವೆಂದು ಯಾರೋ ಹೇಳಿದ್ದರಿಂದ ಸೇಲಂನ ಬಸ್ಸು ಹತ್ತಿದ. ಅಂತೂ ದೀರ್ಘ ಪ್ರಯಾಣ ಮಾಡಿ ಆ ಊರನ್ನು ತಲುಪಿದ. ಚಿಕ್ಕ ಹಳ್ಳಿಯಂತೆ ಇದ್ದ ಆ ಊರಿನಲ್ಲಿ ಈ ವಿಳಾಸವನ್ನು ಪತ್ತೆ ಹಚ್ಚುವುದು ಕಷ್ಟವಾಗಲಿಲ್ಲ.

ಆ ಊರಿನ ಪ್ರಸಿದ್ಧವಾದ ದೇವಸ್ಥಾನದ ಬದಿಯ ಗಲ್ಲಿಯಲ್ಲೇ ಅವರ ಮನೆ. ಹರುಕು ಮುರುಕು ತೆಲುಗಿನಲ್ಲಿ ವಿಚಾರಿಸಿ, ಶಾಸ್ತ್ರಿಗಳ ಮನೆಯನ್ನು ಪತ್ತೆ ಮಾಡಿದ. ಅವರು ಆದರದಿಂದ ಬರಮಾಡಿಕೊಂಡು ಕಾಫಿ ತಿಂಡಿಯನ್ನು ಕೊಟ್ಟು ಸತ್ಕರಿಸಿದರು. ಆತ ಇಂಗ್ಲೀಷಿನಲ್ಲಿ ಮಾತಾಡಿದರು.

"ನಾವು ಹೈದ್ರಾಬಾದಿಗೆ ಹೋಗಲಿಲ್ಲ. ದಾರಿಯಲ್ಲೇ ಇಳಿದು ನಮ್ಮ ಮನೆಗೆ ಬಂದೆವು. ಈ ಲಗೇಜು ನಮ್ಮಲ್ಲಿತ್ತಲ್ಲ. ಇದರ ಹೊಣೆ ನಮ್ಮದು. ಯಾರಾದ್ರೂ ಹುಡುಕಿಕೊಂಡು ಬಂದರೇ ಅಂತ ಇಲ್ಲಿಗೇ ವಾಪಸ್ಸಾದೆವು"

"ಈ ಸೂಟ್‌ಕೇಸನ್ನು ಅಲ್ಲೇ ಬಿಟ್ಟು ಬರಬಹುದಾಗಿತ್ತು"

"ಸೂಟ್‌ಕೇಸಿನಲ್ಲಿ ಭಾರಿ ಬೆಲೆಯ ನಾಲ್ಕಾರು ರೇಶಿಮೆ ಸೀರೆಗಳಿದ್ದವು, ಅದು ನಮಗೆ ಸಿಕ್ಕ ಮೇಲೆ ನಾವೇ ಕೈಯಾರೆ ತಲುಪಿಸುವುದು ನಮ್ಮ ಧರ್ಮ. ಅಲ್ಲದೇ ನಮ್ಮ ಸೂಟ್‌ಕೇಸ್ ಯಾರ ಕೈ ಸೇರಿದೆ ಎಂದು ತಿಳಿಯಬೇಕಿತ್ತಲ್ಲವೇ? ಇದರಲ್ಲಿ ಬೆಲೆ ಬಾಳುವುದು ಏನೂ ಇರಲಿಲ್ಲ. ಆದರೂ ಯಾರದೋ ಅವಿವೇಕದಿಂದ ಅದಲು ಬದಲಾಗಿದೆ. ಆದರೆ ನಮಗೂ ಗಾಬರಿಯಾಯಿತು. ನಿಮ್ಮ ವಸ್ತುವನ್ನು ಕ್ಷೇಮವಾಗಿ ನಿಮಗೆ ತಲುಪಿಸುವುದು ನಮ್ಮ ಕರ್ತವ್ಯ ಅಂತನ್ನಿಸಿತು. ಆದರೆ... ನಮ್ಮಿಂದ ನಿಮಗೆ ಶ್ರಮ ಆಯಿತು" ಕಳಕಳಿಯಿಂದ ನುಡಿದರು.

"ಪರವಾಗಿಲ್ಲ ಬಿಡಿ, ಈ ನೆವದಿಂದ ಈ ಊರಿಗೆ ಬರುವಂತಾಯಿತು. ಇಲ್ಲದಿದ್ದರೆ, ಕಡಪಾ ಅಂತ ಒಂದು ಊರಿದೆ ಅಂತ ಸಹ ನನಗೆ ಗೊತ್ತಾಗುತ್ತಿರಲಿಲ್ಲ" ಗುಂಡಣ್ಣ ಹೇಳಿದ ಪೆಚ್ಚು ನಗೆ ನಗುತ್ತಾ.

ಆ ರಾತ್ರಿ ಅವರ ಬಲವಂತಕ್ಕೆ ಅವರ ಮನೆಯಲ್ಲಿ ಉಳಿದು, ಅವರ ಆತಿಥ್ಯವನ್ನು ಸ್ವೀಕರಿಸಿ, ಬೆಳಿಗ್ಗೆ ಸ್ನಾನ ಮಾಡಿ ಪುರಾತನವಾದ ಪ್ರಸಿದ್ಧವಾದ ದೇವಸ್ಥಾನಕ್ಕೆ ಹೋಗಿ, ದೇವರಿಗೆ ಮನಸಾ ವಂದಿಸಿ, ಆ ದಂಪತಿಗಳಿಗೆ ನಮಸ್ಕರಿಸಿ, ಗೋಕರ್ಣದ ಪ್ರಸಾದವನ್ನು ಪಡೆದು ಬೆಂಗಳೂರಿನ ಬಸ್ಸನ್ನು ಹತ್ತಿದ.

ಮಧ್ಯರಾತ್ರಿಯ ಹೊತ್ತಿಗೆ ಗುಂಡಣ್ಣ ಮನೆಯನ್ನು ತಲುಪಿದ. ಲಕ್ಷ್ಮಿ ಆತುರದಿಂದ ಸೂಟ್‌ಕೇಸಿನ ಬಾಗಿಲನ್ನು ತೆರೆದಳು. ಎಲ್ಲಾ ತಾನಿಟ್ಟ ಹಾಗೇ ಇದೆ. ಯಾವುದೂ ಅಸ್ತವ್ಯಸ್ತಗೊಂಡಿಲ್ಲ. ಆದರೂ ಮನಸ್ಸು ಕಹಿಯಾಯಿತು.

"ನಾನೆಂತಹ ಪಾಪಿ! ಹೊಸ ಸೀರೆ ತಗೊಂಡರೂ, ಉಡುವ ಅವಕಾಶ ಸಿಗಲಿಲ್ಲ. ಇದಕ್ಕೆ ಹೊಣೆ ಯಾರು? ನಾನೇ? ಅಥವಾ ಆ ದಂಪತಿಗಳೇ?"

"ಏನೇ ಅನ್ನಿ, ಅವರು ಮಾಡಿದ್ದು ತಪ್ಪು. ಇದನ್ನು ಬೆಂಗಳೂರಿನಲ್ಲಿ ಬಿಟ್ಟು ಹೋಗಬಾರದಾಗಿತ್ತೇ"

ಬೆಲೆ ಬಾಳುವ ಸೀರೆಗಳ ಪೆಟ್ಟಿಗೆಯನ್ನು ಹೇಗೆ ಬಿಟ್ಟು ಹೋಗ್ತಾರೆ? ಒಂದು ಕಳುವಾದರೂ, ಅವರದ್ದೇ ತಪ್ಪಾಗುತ್ತಿತ್ತು"

"ಅಂತೂ ಕೊಂಕಣ ಸುತ್ತಿ ಮೈಲಾರಕ್ಕೆ ಹೋಗಿ ಬಂದಂತಾಯ್ತು. ನಾಳೇನೇ ಈ ಸೀರೆಗಳನ್ನು ವಾಪಸ್ಸು ಕೊಟ್ಟು ಬಿಡಿ... ನನಗೆ ಬೇಡ"

"ಇರಲಿ ಇಟ್ಕೋ... ಕಳದೇ ಹೋಗಿದ್ದು ಮತ್ತೆ ನಮ್ಮ ಕೈ ಸೇರಬೇಕಾದರೆ, ಏನೋ ಮಹತ್ವವಿರಬೇಕು. 'ಕಡಪಾ'ದಿಂದ ದೇವರ ಪ್ರಸಾದ ಸಹ ತಂದಿದೀನಿ. ಆದರೆ ನನಗೂ ಅರ್ಥವಾಗ್ತಿಲ್ಲ. ಹೀಗೇಕಾಯ್ತು ಅಂತ? ಎಂದು ಲೊಚಗುಟ್ಟಿದ. ಮದುವೆಗೆ ಹೋದದ್ದಕ್ಕಿಂತ ಹೆಚ್ಚಿನ ಖುಷಿಯಾಗಿತ್ತು.

* *

# ಭರಣಿ

"ನೀವು ಯಾವ ಊರಿನಲ್ಲಿ ಇಳೀತೀರಿ?" ಆ ವ್ಯಕ್ತಿ ಕೇಳಿದಾಗ, ಪದ್ಮಿನಿ ಅವನನ್ನೇ ನೋಡಿದಳು.

"ನೀವು ಶಿವಮೊಗ್ಗಾ ತನಕ ಹೋಗೋದಾದ್ರೆ.. ನನಗೊಂದು ಫೇವರ್ ಮಾಡ್ತೀರಾ?" ಆ ವ್ಯಕ್ತಿ ಮತ್ತೆ ಕೇಳಿತು.

"ಏನದು?" ಅನುಮಾನದಿಂದ ಪ್ರಶ್ನಿಸಿದಳು.

"ಇವಳು ನನ್ನ ಮಗಳು. ಶಿವಮೊಗ್ಗಾಕ್ಕೆ ಅಜ್ಜಿ ಮನೆಗೆ ಒಬ್ಬಳೇ ಹೊರಟಿದಾಳೆ. ಅದೂ ಮೊದಲ ಸಲ"

"ಅಷ್ಟೇ ತಾನೇ... ನಾನು ಸ್ವಲ್ಪ ನೋಡ್ಕೋಬೇಕು... ಹೌದಾ?"

ಬಸ್‌ಸ್ಟ್ಯಾಂಡ್‌ಗೆ ಅವರ ಮನೆಯವರು ಯಾರಾದ್ರೂ ಬಂದಿರ್ತಾರೆ. ಆ ವ್ಯಕ್ತಿ ತಡವರಿಸುತ್ತಾ ನುಡಿದಾಗ, ಪದ್ಮಿನಿ ಮುಗುಳ್ನಕ್ಕಳು.

"ನೀವು ಏನೂ ವರಿ ಮಾಡ್ಕೋಬೇಡಿ. ನಾನು ಶಿವಮೊಗ್ಗಾ ತನಕ ನಿಮ್ಮ ಮಗಳಿಗೆ ಕಂಪೆನಿ ಕೊಡ್ತೀನಿ, ಕೇರ್ ತಗೋಳ್ತೀನಿ. ಒಂದು ವೇಳೆ ಯಾರೂ ಬಂದಿಲ್ಲದಿದ್ದರೆ.. ಮನೇನೂ ತಲುಪಿಸ್ತೀನಿ"

"ನೀವು ಶಿವಮೊಗ್ಗಾದವರೇನಾ?"

"ಹುಂ... ಬೆಳೆದಿದ್ದು ಓದಿದ್ದು ಎಲ್ಲಾ ಅಲ್ಲೇ... ಏನು ಮಗೂ ನಿನ್ನ ಹೆಸರು?" ಪಕ್ಕದಲ್ಲಿ ಕೂತಿದ್ದ ಹುಡುಗಿಯ ಕಡೆ ತಿರುಗಿದಳು.

ಆ ಹುಡುಗಿ ಪಿಸುದನಿಯಲ್ಲಿ ಏನೋ ಹೇಳಿತು. ಇವಳಿಗೆ ಕೇಳಿಸಲಿಲ್ಲ. "ಭರಣಿ ಅಂತ ಇವಳ ಹೆಸರು. ತುಂಬಾ ಸಂಕೋಚದ ಸ್ವಭಾವ. ಯಾರ ಜೊತೇಲೂ ಬೆರೆಯಲ್ಲ, ಹೆಚ್ಚಿಗೆ ಮಾತಾಡುಲ್ಲ" ಆ ವ್ಯಕ್ತಿ ತನ್ನ ಪಾಡಿಗೆ ತಾನು ಸುಮ್ಮನೇ ಕೂತಿತ್ತು. ಇತ್ತ ತಿರುಗಿರಲಿಲ್ಲ.

"ಇದಕ್ಕೇ ನನಗೆ ಭಯ. ಈಗ ನಿಮ್ಮಂಥೋರು ಸಿಕ್ಕಿರೋದ್ರಿಂದ ಭಯವಿಲ್ಲ ಬಿಡಿ"

"ನಾನು ಅಪರಿಚಿತಳು. ಈ ವ್ಯಕ್ತಿಗೆ ನನ್ನ ಮೇಲೆ ಯಾವ ನಂಬಿಕೆ ಅಂತನ್ನಿಸಿತು. ಬಸ್ಸು ಹೊರಟಿತು. ಆ ವ್ಯಕ್ತಿ ಮತ್ತೆ ಮತ್ತೆ ಆ ಹುಡುಗಿಗೂ, ಇವಳಿಗೂ ಹೇಳಿ ಹೇಳಿ ಕೈಯಾಡಿಸಿದ.

ಪದ್ಮಿನಿ ಆ ಹುಡುಗಿಯನ್ನು ಮಾತನಾಡಿಸಲು ಪ್ರಯತ್ನಿಸಿದರೂ, ಆ ಹುಡುಗಿ ಸುಮ್ಮನೇ ಕೂತಿತ್ತು. ಆ ಹುಡುಗಿಯೊಡನೆ ಮಾತನಾಡಲು ಏನು ವಿಷಯವಿಲ್ಲದಿದ್ದರೂ, ಕಾಲಹರಣ ಮಾಡಬೇಕಾಗಿತ್ತು. ಪಿಳಿಪಿಳಿ ಕಣ್ಣು ಬಿಟ್ಟು, ಕಿಟಕಿಯಿಂದಾಚೆ ಕಾಣುವ ಹೊರಗಿನ ದೃಶ್ಯವನ್ನೇ ನೋಡುತ್ತಾ ಕೂತಿದ್ದ ಹುಡುಗಿ ಇವಳ ಕಡೆ ತಿರುಗಿರಲಿಲ್ಲ.

ಒಂದು ಕಡೆ ಬಸ್ಸು, ಕಾಫಿ ತಿಂಡಿಗಾಗಿ ನಿಂತಾಗ, ಪದ್ಮಿನಿ ತನ್ನ ಬಳಿ ಇದ್ದ ಕಿತ್ತಲೆ ಹಣ್ಣನ್ನು ಹುಡುಗಿಯ ಕಡೆ ನೀಡಿದಳು. ಆದರೆ ಆ ಹುಡುಗಿ ತಗೊಳ್ಳಲಿಲ್ಲ. ಪಿಸುದನಿಯಲ್ಲಿ 'ಬೇಡಾ... ಬೇಡಾ...' ಎಂದು ಹೇಳಿದ್ದು ಇವಳಿಗೆ ಕೇಳಿಸಲಿಲ್ಲ. ಅರ್ಥ ಮಾಡಿಕೊಂಡಳು. ತಾನೂ ತಿನ್ನಲಿಲ್ಲ. ಬಾಟಲಿನ ನೀರನ್ನು ಒಂದು ಗುಟುಕು ಕುಡಿದು ಕಣ್ಣು ಮುಚ್ಚಿ ಕುಳಿತಳು.

ಈ ಹುಡುಗಿಯ ರೂಪ, ಹಾವಭಾವ, ವರ್ತನೆ ಏನನ್ನೋ ನೆನಪಿಸುತ್ತಿತ್ತು. ಎಷ್ಟೇ ಸಂಕೋಚವಿದ್ದರೂ, ಹೀಗೆ ಮೂಕಿಯಂತೆ ಇರಲು ಸಾಧ್ಯವಿಲ್ಲ. ಕೇಳಿದಕ್ಕಾದರೂ ಉತ್ತರ ಕೊಡಬೇಡವೇ, ಸ್ಕೂಲಿನಲ್ಲಿ ಏನು ಮಾಡುತ್ತದ್ದೋ... ಕೇಳಿದ ಪ್ರಶ್ನೆಗೆ ಉತ್ತರ ನೀಡದೇ ಸುಮ್ಮನೇ ನಿಂತಿರಲು ಸಾಧ್ಯವೇ? ಅದಕ್ಕೆ ಟೀಚರ್ ಶಿಕ್ಷಿಸದೇ ಬಿಡುತ್ತಾರೆಯೇ? ಅದೂ ಈ ಕಾಲದಲ್ಲಿ? ಇಂಥ ಸ್ಪರ್ಧಾತ್ಮಕವಾದ ಯುಗದಲ್ಲಿ? ಪೇರೆಂಟ್ಸ್‌ಗಾದರೂ ತಿಳಿಯಬೇಡವೇ... ಈ ಹುಡುಗಿ ಹುಟ್ಟಿನಿಂದ ಹೀಗೆಯೇ ಅಥವಾ ಬೆಳೆಯುತ್ತಾ ಹೀಗೆ ಕಪ್ಪೆ ಚಿಪ್ಪಿನೊಳಗೆ ಒಳ ಸರಿಯುವ ಅಭ್ಯಾಸ ಮಾಡಿಕೊಂಡಿರಬಹುದೇ?

ನಮ್ಮನ್ನೆಲ್ಲಾ, ನಾವು ಈ ವಯಸ್ಸಿನಲ್ಲಿದ್ದಾಗ ಮನೆಯವರು "ಅದೆಷ್ಟು ಮಾತಾಡ್ತೀರಿ ಪುರಸೊತ್ತಿಲ್ಲದೇ? ಮರದ ಬಾಯಾಗಿದ್ದರೆ ಇಷ್ಟು ಹೊತ್ತಿಗೆ ಮುರಿದು ಹೋಗಿರುತ್ತಿತ್ತು" ಅಂತ ಬೈಯುತ್ತಿದ್ದರು.

ಇನ್ನು ಸ್ಕೂಲಿನಲ್ಲೋ... ನಾವು ಹುಡುಗಿಯರು ಸಮಯ ಸಿಕ್ಕಾಗೆಲ್ಲ ಹರಟೆ ಹೊಡೆಯದೇ ಇರುತ್ತಿರಲಿಲ್ಲ. ಒಬ್ಬರನ್ನೊಬ್ಬರು ಗಪಲಿ ಮಾಡಿಕೊಂಡು ನಗುವುದು. ಅದಕ್ಕಾಗಿ ಟೀಚರ್‌ನಿಂದ ಬೈಸಿಕೊಳ್ಳುವುದು, ಕ್ಲಾಸಿನಿಂದ ಆಚೆ ಹೋಗುವುದು ಎಷ್ಟೋ ಬಾರಿ ನಡೆದಿತ್ತು. ಅಷ್ಟಾದರೂ, ನಮ್ಮ ಮಾತಿಗೆ ಬ್ರೇಕ್ ಇರುತ್ತಿರಲಿಲ್ಲ. ನಮ್ಮ ಕನ್ನಡ ಪಂಡಿತರಂತೂ ನಮ್ಮನ್ನೆಲ್ಲಾ ಕಡೆಯ ಬೆಂಚಿನಲ್ಲಿ ಕುಳಿತಿರುತ್ತಿದ್ದ ಆ ಹುಡುಗಿಗೆ ಹೋಲಿಸಿ, ಹಂಗಿಸಿ ಬೈಯುತ್ತಿದ್ದರು.

ಅವಳ ಕಾಲ ಕೆಳಗೆ ನುಸಿದರೂ ನಿಮಗೆ ಬುದ್ಧಿ ಬರೊಲ್ಲ ಈ ಜನ್ಮದಲ್ಲಿ. ಆ ಹುಡುಗೀನ ನೋಡಿ, ಒಳ್ಳೇ ಗೌರಮ್ಮನ ಹಾಗೆ, ಹೇಗೆ ಮೌನವಾಗಿ ಕುಳಿತಿದ್ದಾಳೆ, ಹಳೇ ಕಾಲದವಳಂತೆ. ಬಿಗಿಯಾಗಿ ಜಡೆ ಹೆಣೆದುಕೊಂಡು, ಕಾಸಿನಗಲದ ಕುಂಕುಮ ಧರಿಸಿ ಬರುತ್ತಿದ್ದಳು. ದಂತದ ಮೈ ಬಣ್ಣದವಳಾದರೂ, ನಮಗೇನೂ ಅದು ಅತಿಶಯವೆನಿಸುತ್ತಿರಲಿಲ್ಲ. ಯಾರೊಂದಿಗೂ ಬೆರೆಯದೇ, ಹಿಂದಿನ ಬೆಂಚಿನಲ್ಲಿ ತನ್ನ ಪಾಡಿಗೆ ಕುಳಿತಿರುತ್ತಿದ್ದವಳ ಬಗ್ಗೆ ಯಾರಿಗೂ ಆಸಕ್ತಿ ಇರಲಿಲ್ಲ. ಅದೇ ತಾನೇ ಹೈಸ್ಕೂಲಿನ ಮೆಟ್ಟಿಲಿಗೆ ಕಾಲಿಟ್ಟಿದ್ದ ನಾವುಗಳು ಲಂಗ ರವಿಕೆ ಧರಿಸಿದರೆ, ಅವಳು ಬಣ್ಣ ಬಣ್ಣದ ವಾಯಿಲ್ ಸೀರೆಯನ್ನುಟ್ಟು ಮೈ ತುಂಬಾ ಸೆರಗನ್ನು ಹೊದ್ದು ಬರುತ್ತಿದ್ದಳು. ಅವಳ

ಹೆಸರು ಮೂಕಾಂಬಿಕಾ ಹೆಸರಿಗೆ ತಕ್ಕಂತೆ, ಮೂಕಿಯೇ ಎನ್ನುವಷ್ಟು ಮೌನ. ಸದಾ ಕತ್ತು ಬಗ್ಗಿಸಿ, ಯಾವುದೋ ಪುಸ್ತಕದಲ್ಲಿ ಕಣ್ಣು ನೆಟ್ಟಿರುತ್ತಿದ್ದಳು. ನೋಡುವವರಿಗೆ ಸದಾ ಓದುತ್ತಿರುತ್ತಾಳೆ ಎನ್ನುವಂತೆ. ಅಕ್ಕ ಪಕ್ಕ ಕುಳಿತಿದ್ದ ಹುಡುಗಿಯರು ಕಿತ್ತಾಡಿ ಕಿರುಚಾಡಿ ಜಗಳವಾಡಿದರೂ ತುಟಿಪಿಟಕೆನ್ನುತ್ತಿರಲಿಲ್ಲ. ಅಂತಹ ಶ್ರೀಮದ್ಗಾಂಭೀರ್ಯ!

ಹಾಜರಿ ಪುಸ್ತಕ ತೆಗೆದು ಒಬ್ಬೊಬ್ಬರ ಹೆಸರನ್ನೇ ಕರೆವಾಗ, ಒಬ್ಬೊಬ್ಬ ಹುಡುಗಿಯೂ ಎದ್ದು ನಿಂತು, ಎಸ್ ಟೀಚರ್ ಎಂದೋ... ಪ್ರೆಸೆಂಟ್ ಟೀಚರ್ ಎಂದೋ ಹೇಳುವುದು ವಾಡಿಕೆ. ಆದರೆ ಈ ಮೂಕಾಂಬಿಕಾ ಸುಮ್ಮನೇ ಎದ್ದು ನಿಂತು ಕೂರುತ್ತಿದ್ದಳು. ಟೀಚರ್ ತಾನೇ ಕತ್ತೆತ್ತಿ ನೋಡಿ ಅವಳು ಬಂದಿದಾಳೆಂದು ತಿಳಿದು ಹಾಜರಿ ಹಾಕಬೇಕಾಗುತ್ತಿತ್ತು. ಆಗಲೇ ಅವಳ ಹೆಸರು ಮೂಕಾಂಬಿಕ ಎಂದು ನಮಗೆ ತಿಳಿದದ್ದು.

ಉಪಾಧ್ಯಾಯರುಗಳು, ಅವಳು ಬಹುಶಃ ನಮ್ಮೆಲ್ಲರಿಗಿಂತ ವಯಸ್ಸಿನಲ್ಲಿ ದೊಡ್ಡವಳಿರಬಹುದೆಂದು ಭಾವಿಸಿ, ಅವಳನ್ನು ಗೇಲಿ ಮಾಡುತ್ತಿರಲಿಲ್ಲ. ಬೈಯುತ್ತಿರಲಿಲ್ಲ. ಶಿಕ್ಷಿಸುತ್ತಿರಲಿಲ್ಲ.

ನಾವು ಹೈಸ್ಕೂಲು ಮೊದಲನೇ ವರ್ಷದಲ್ಲಿ ಬಿಟ್ಟು ನೂರಾ ಇಪ್ಪತ್ತು ಜನ ವಿದ್ಯಾರ್ಥಿನಿಯರಿದ್ದೆವು. ಎರಡು ಸೆಕ್ಷನ್‌ಗಳನ್ನಾಗಿ ಮಾಡಿದ್ದರು. ವಿಜ್ಞಾನ ಮತ್ತು ಗಣಿತದ ವಿಭಾಗ ಹಾಗೂ ಚರಿತ್ರೆ, ಭೂಗೋಳಶಾಸ್ತ್ರ ಇತರೇ ಕಲಾಶಾಸ್ತ್ರಗಳ ವಿಭಾಗ ಅಂತ ಎರಡು ಸೆಕ್ಷನ್‌ಗಳು ವಿಜ್ಞಾನ, ಗಣಿತದವರ ಸೆಕ್ಷನ್‌ನಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಕಡಿಮೆ ಇದ್ದುದರಿಂದ, ಹೊಲಿಗೆ ಹಾಗೂ ಸಂಗೀತವನ್ನು ಐಚ್ಛಿಕವನ್ನಾಗಿ ತೆಗೆದುಕೊಂಡ ಹುಡುಗಿಯರನ್ನು ಸೇರಿಸಿದ್ದರು. ಅವರ ಸಂಖ್ಯೆ ಒಟ್ಟು ಹತ್ತೋ ಹನ್ನೆರಡೋ ಅಷ್ಟೇ. ಇವರಲ್ಲಿ ಮೂಕಾಂಬಿಕಳ ಐಚ್ಛಿಕ ವಿಷಯ ಏನು ಗೊತ್ತೇ... ಸಂಗೀತ ! ನಮಗೆಲ್ಲ ತಮಾಷೆ ಎನಿಸಿತ್ತು. ಮಾತನ್ನೇ ಆಡದಿರುವವಳು, ಹಾಡನ್ನು ಹೇಗೆ ಹೇಳ್ತಾಳೆ... ಎಂದಾದರೂ ಅವಳು "ಸರಿಗಮಪದನಿಸ" ಹೇಳುವುದನ್ನು ಕೇಳಲೇ ಬೇಕು ಅಂತನ್ನಿಸಿದರೂ, ಅದಕ್ಕೆ ಅವಕಾಶ ಸಿಕ್ಕಿರಲಿಲ್ಲ. ಕಾರಣ ನಮ್ಮ ಸಂಗೀತದ ಟೀಚರ್ ಗಿರಿಜಮ್ಮ, ತುಂಬಾ ಒಳ್ಳೆಯವರು. ಆದರೆ, ತಾವು ತರಗತಿ ನಡೆಸುವಾಗ, ಬೇರೆಯವರನ್ನು ಒಳಕ್ಕೆ ಬಿಡುತ್ತಿರಲಿಲ್ಲ. ಹೆಡ್‌ಮೇಷ್ಟ್ರಿಗೆ ಹೇಳ್ತೀನೆಂದು ಹೆದರಿಸುತ್ತಿದ್ದರು. ನಮಗೆಲ್ಲ ಶನಿವಾರದ ದಿನ ಮಾತ್ರ ಕಡ್ಡಾಯ ಸಂಗೀತದ ಪಿರಿಯಡ್ ಇರುತ್ತಿತ್ತು. ಆದರೆ ಶನಿವಾರದಂದು ಮೂಕಾಂಬಿಕ ಸ್ಕೂಲಿಗೇ ಬರುತ್ತಿರಲಿಲ್ಲ. ಪ್ರತೀ ಶನಿವಾರ ಎಲ್ಲಿಗೆ ಹೋಗುತ್ತಿದ್ದಳೋ ತಿಳಿಯದು.

ಹೀಗೇ ಮೂರು ವರ್ಷ ಕಳೆಯುತ್ತಾ ಬಂತು. ಕಡೇ ವರ್ಷ ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷೆ. ಗಣಿತ ಮತ್ತು ವಿಜ್ಞಾನವನ್ನು ಐಚ್ಛಿಕವನ್ನಾಗಿ ತೆಗೆದುಕೊಂಡ ನಮಗೆ ಪರೀಕ್ಷೆ ಬಗ್ಗೆ ಆತಂಕವಿತ್ತು. ಆದರೆ ಹೆದರಿಕೆ ಇರಲಿಲ್ಲ. ಪಾಸಂತೂ ಆಗುವ ವಿಶ್ವಾಸವಿತ್ತು. ಅದೇ ಎಷ್ಟೋ ಜನ ಹುಡುಗಿಯರಿಗೆ ದೊಡ್ಡ ಪರೀಕ್ಷೆ. ಆ ನಂತರ ಎಷ್ಟೋ ಹುಡುಗಿಯರು ಓದನ್ನು ಮುಂದುವರೆಸುತ್ತಿರಲಿಲ್ಲ... ಆ ಕಾಲದಲ್ಲಿ..

ಪರೀಕ್ಷೆ ಮುಗಿಯಿತು. ಫಲಿತಾಂಶದ ದಿನವೂ ಬಂತು, ಎಲ್ಲರೂ ಸ್ಕೂಲಿನ ಆವರಣವನ್ನು ತಲುಪಿದೆವು. ನೋಟೀಸ್ ಬೋರ್ಡ್‌ನಲ್ಲಿ ಫಲಿತಾಂಶದ ಪಟ್ಟಿಯನ್ನು ಹಾಕಿದ್ದರು. ಮೊದಲು ನಮ್ಮ ನಮ್ಮ ಫಲಿತಾಂಶವನ್ನು ನೋಡಿಕೊಂಡೆವು. ನಮ್ಮ ನಮ್ಮ ಅಂದರೇ... ನಮ್ಮದೇ ಒಂದು ಗುಂಪು. ಅದರಲ್ಲಿ ನಾವು ಏಳೆಂಟು ಹುಡುಗಿಯರು. ನಮ್ಮ ನಮ್ಮಲ್ಲೇ ಒಳಗೊಳಗೇ ಸ್ಪರ್ಧೆ. ಯಾರಿಗೆ ಯಾವ ವಿಷಯದಲ್ಲಿ ಎಷ್ಟು ಅಂಕಗಳು ಲಭಿಸಿವೆ... ಅಂತ. ಒಂಥರಾ ಆರೋಗ್ಯಕರವಾದ ಸ್ಪರ್ಧೆ, ಈರ್ಷೆ ಅಸೂಯೆಗಳಿರಲಿಲ್ಲ.

ನಂತರ ಯಾರ್‍ಯಾರು ನಪಾಸಾಗಿದ್ದಾರೆ ಎಂದು ಕುತೂಹಲದಿಂದ ನೋಡಲಾರಂಭಿಸಿದೆವು. ಕಡೆಗೆ ಮೂಕಾಂಬಿಕಳ ಸರದಿ ಬಂತು. ಮೂಕಾಂಬಿಕ, ಇಂಗ್ಲೀಷ್, ಕನ್ನಡ, ಸಮಾಜಶಾಸ್ತ್ರಗಳಲ್ಲಿ ಫೇಲಾಗಿದ್ದಳು, ಸಂಗೀತದಲ್ಲಿ ಪಾಸಾಗಿದ್ದಳು. ಎಲ್ಲರಿಗೂ ಇದು ಅತ್ಯಂತ ಸೋಜಿಗದ ವಿಷಯ. ತನ್ನ ಪಾಡಿಗೆ ತಾನು ಓದಿಕೊಂಡಿರುತ್ತಿದ್ದವಳು ಉಳಿದ ಎಲ್ಲಾ ವಿಷಯಗಳಲ್ಲೂ ನಪಾಸು. ಬಾಯಿಯನ್ನೇ ಬಿಡದೇ, ಸ್ವರ ಹೇಗಿದೆ ಅಂತ ಸಹ ಯಾರಿಗೂ ತಿಳಿಸದಿದ್ದವಳು ಸಂಗೀತದಲ್ಲಿ ಪಾಸಾಗಿದ್ದಳು. ಫಲಿತಾಂಶ ನೋಡಲು ಅವಳು ಬಂದಿರಲಿಲ್ಲವಾದ್ದರಿಂದ, ಕುತೂಹಲವೆಲ್ಲ ಹಾಗೇ ತಣ್ಣಗಾಯಿತು.

ನಾವುಗಳು ಸಂಗೀತದ ಟೀಚರ್ ಗಿರಿಜಮ್ಮನ ಬಳಿಗೆ ಓಡಿದೆವು. ಅವರು ಮೊದಲು ನಮ್ಮ ಫಲಿತಾಂಶಗಳನ್ನು ಕೇಳಿ ತಿಳಿದುಕೊಂಡರು. ನಂತರ ಮೂಕಾಂಬಿಕಾಳ ಫಲಿತಾಂಶದ ಬಗ್ಗೆ ಕೇಳಿದರು. ಇದ್ದ ವಿಷಯವನ್ನು ತಿಳಿಸಿದೆವು. ಅವರ ಮುಖ ಪೆಚ್ಚಾಗಿತ್ತು.

ಒಂದು ದಿನವೂ ಅವಳು ಬಾಯಿ ಬಿಟ್ಟು ಹಾಡಿರಲಿಲ್ಲವಾದರೂ, ಹುಡುಗಿಯ ಮನಸ್ಸನ್ನು ಕೆಡಿಸಬಾರದು ಎಂಬ ಉದ್ದೇಶದಿಂದ ಅವರು ಶಿಫಾರಸ್ಸು ಮಾಡಿ ಅವಳನ್ನು ಸಂಗೀತ ಪರೀಕ್ಷೆಯಲ್ಲಿ ಪಾಸಾಗುವಂತೆ ಮಾಡಿದ್ದರು. ಆದರೆ ಉಳಿದ ವಿಷಯಗಳು! ಆದರೆ ಅವರು ಆ ಗುಟ್ಟನ್ನು ಹೊರಗೆಡವಲಿಲ್ಲ.

ಹೆಣ್ಣು ಹುಡುಗಿಯರು ತುಂಬಾ ಸೂಕ್ಷ್ಮ. ಅವರ ಬಾಳು ಹಸನಾದರೆ ಸರಿ, ಇಲ್ಲದಿದ್ದರೆ ಅವರ ಗತಿ ಏನು? ನಮ್ಮ ಕೈ ನಡೆಯುವಾಗ, ನಾವು ಹುಡುಗಿಯರಿಗೆ ಸಹಾಯ ಮಾಡಬೇಕು. ನಮ್ಮಿಂದ ಅವರ ಭವಿಷ್ಯ ಕೆಡುವಂತಾಗಬಾರದು. ಮುಂದೆ ಅವರ ಹಣೇಲಿ ಏನು ಬರೆದಿದೆಯೋ ಅದು ನೆರವೇರುತ್ತೆ.

ಪಾಪ, ಮೂಕಾಂಬಿಕ ತುಂಬಾ ಒಳ್ಳೆಯ ಹುಡುಗಿ. ಅತೀ ಮುಗ್ಧೆ. ಪ್ರಪಂಚವನ್ನು ಬಿಚ್ಚು ಕಣ್ಣಿನಿಂದ ನೋಡುವ ಶಕ್ತಿ ಇಲ್ಲದವಳು. ಅವಳೆಷ್ಟು ಒಂಟಿ ಎಂದು ನಿಮಗ್ಯಾರಿಗೂ ತಿಳಿಯದು. ತಾನೇ ತಯಾರಿಸಿಕೊಂಡ ಕೋಶದೊಳಗೇ ಇದಾಳೆ. ಅವಳನ್ನು ಅದರಿಂದ ಹೊರ ತರುವುದು ಕಷ್ಟದ ಕೆಲಸ.

ಓದು ಬರಹ, ನಡೆ ನುಡಿ, ಉಡಿಗೆ ತೊಡಿಗೆಗಳಲ್ಲಿ ನಿಮ್ಮೆಲ್ಲರಿಗಿಂತ ಭಿನ್ನ ಅವಳು. ಅವಳು ನಿಮ್ಮಂತೆ ಆಗುವುದು ಸಾಧ್ಯವಿಲ್ಲ. ನೀವು ಅವಳೊಡನೆ ಬೆರೆಯುವುದಿಲ್ಲ.

ಪರೀಕ್ಷೆಯಲ್ಲಿ ಒಂದಾದರೂ ವಿಷಯದಲ್ಲಿ ಪಾಸಾದನೆಂಬ ವಿಶ್ವಾಸ ಅವಳಿಗಿರುತ್ತದೆ. ಅವಳ ರೂಪ, ಅವಳ ಬಣ್ಣ, ಅವಳ ಸೊಬಗು, ಅವಳ ನಿಲುವು ನಿಮ್ಮಲ್ಲಿ ಯಾರಿಗೂ ಇಲ್ಲ. ಅದೇ ಅವಳಿಗೆ ರಕ್ಷೆ. ದೇವರು ಅವಳನ್ನು ಹಾಗೂ ನಿಮ್ಮೆಲ್ಲರನ್ನು ಕಾಪಾಡಲಿ ಎಂದು ಸಂಗೀತದ ಮೇಡಂ ಮುಕ್ತವಾಗಿ ಹಾರೈಸಿದ್ದರು.

"ಹೌದು ಅವರು ಹೇಳುವುದು ನಿಜವೇ. ಆದರೆ ನಮಗೆ ಆಗ ಏನೂ ಅನ್ನಿಸಿರಲಿಲ್ಲ. ನಮ್ಮ ನಮ್ಮ ಉತ್ಸಾಹ, ನಮ್ಮ ನಮ್ಮ ಆಸೆ, ಆಸಕ್ತಿಗಳಲ್ಲಿ ಅವರ ಮಾತುಗಳನ್ನು ಗಂಭೀರವಾಗಿ ಯೋಚಿಸಲಿಲ್ಲ. ಅವರು ಹೇಳಿದ್ದಂತೆ, ಮೂಕಾಂಬಿಕಾಳ ರೂಪು ಅಸಾಧಾರಣ. ಫೋಟೋದಲ್ಲಿರುವ ಲಕ್ಷ್ಮಿಯ, ಸರಸ್ವತಿಯರಂತೆ ಸೌಮ್ಯ ರೂಪ, ನಾಗವರ್ಮನ ಕಾದಂಬರಿಯ ಮಹಾಶ್ವೇತೆಯಂತೆ ನಿಷ್ಕಲ್ಮಶವಾದ ಚೆಲುವು. ಆದರೆ... ಒಂದು ಕಪ್ಪು ಚುಕ್ಕೆ! ಅವಳು ಎಲ್ಲರಂತಿರಲಿಲ್ಲ ಎಂದು ನಮಗೆಲ್ಲ ಅರ್ಥವಾದದ್ದು ಎಷ್ಟೋ ವರ್ಷಗಳ ನಂತರ.

ಈಗ ನಮಗೆ ಹೊರ ಪ್ರಪಂಚದಲ್ಲಿ ಏನೇನೆಲ್ಲಾ ಚಮತ್ಕಾರಗಳು ನಡೆಯುತ್ತವೆ ಎಂದು ಅರ್ಥವಾಗುತ್ತದೆ. ನಾವುಗಳು ಈಗೀಗ ಕಣ್ಣು ತೆರೆದು, ಚಮತ್ಕಾರಗಳತ್ತ ಕಣ್ಣು ಹರಿಸುತ್ತಿದ್ದೇವೆ.

ಪದ್ಮಿನಿಯ ನಿದ್ದೆ ಚೊಂಪು ಹರಿಯಿತು. ಪಕ್ಕದಲ್ಲಿ ಕುಳಿತಿದ್ದ ಹುಡುಗಿಯ ಕಡೆ ಕಣ್ಣು ಹಾಯಿಸಿದಳು. ಅದೇ ಭಂಗಿಯಲ್ಲಿ, ಅದೇ ರೀತಿ ಕಿಟಕಿಯಿಂದಾಚೆ ನೋಡುತ್ತಿದ್ದಾಳೆ. ಕಣ್ಣುಗಳಾದರೂ ನೋಯುವುದಿಲ್ಲವೆ?

"ಒಂದು ಗಳಿಗೆ ನಿದ್ದೆ ಮಾಡಬಾರದಾ ಭರಣಿ? ಸುಸ್ತಾಗಲ್ವಾ?" ಇಲ್ಲವೆನ್ನುವಂತೆ ತಲೆಯಾಡಿಸಿದಳು. ಭರಣಿಯನ್ನೇ ನೋಡಿದಳು.

ಹೌದು ಅದೇ ರೂಪ, ಅದೇ ಮುಗ್ಧತೆ. ತನ್ನ ರೂಪದ ಬಗ್ಗೆ ಗಮನವಿಲ್ಲದೇ ಇರುವುದರಿಂದ, ಏನೋ ಒಂದು ರೀತಿಯ ಭಯ ಹುಟ್ಟಿಸುವಂತಹ ಗಾಂಭೀರ್ಯ! ಈ ವಯಸ್ಸಿಗೇ ಇಷ್ಟು ಗಂಭೀರತೆ! ಈ ಹುಡುಗಿ ಖಂಡಿತಾ ಮೂಕಾಂಬಿಕಳ ಮಗಳಿರಬೇಕು.

ನಿನ್ನ ತಾಯಿಯ ಹೆಸರೇನು? ನಿಮ್ಮ ತಂದೆ ಏನು ಮಾಡ್ತಾರೆ? ನೀವು ಎಲ್ಲಿಯವರು? ಏನೇ ಕೇಳಿದರೂ ಈ ಹುಡುಗಿ ಖಂಡಿತಾ ಉತ್ತರ ಕೊಡುವುದಿಲ್ಲ. ಕೇಳಿ ಏನು ಪ್ರಯೋಜನ ಎಂದುಕೊಂಡು ನಿಟ್ಟುಸಿರುಗರೆದಳು.

ಶಿವಮೊಗ್ಗಾ ಬಸ್‌ಸ್ಟ್ಯಾಂಡ್‌ನಲ್ಲಿ ಬಸ್ಸು ನಿಂತಿತು. ಭರಣಿಯನ್ನು ಕರೆದೊಯ್ಯಲು ಯಾರೂ ಬಂದಿರಲಿಲ್ಲವೆನ್ನುವುದು ತಿಳಿಯಿತು. ಈಗ ಏನು ಮಾಡುವುದು? ಈ ಹುಡುಗಿಗೆ ಮನೆ ವಿಳಾಸ ತಿಳಿದಿದೆಯೋ ಇಲ್ಲವೋ? ಇಲ್ಲೇ ಬಿಟ್ಟು ಹೋಗುವುದು ಹೇಗೆ? ಎಷ್ಟಾಗಲೀ ಹೆಣ್ಣು ಹುಡುಗಿ, ಈ ಹೊತ್ನಲ್ಲಿ ಇಲ್ಲಿ ಇವರುಗಳ ಜತೆ ಇರುವುದು ಸರಿಯಲ್ಲ. ಏನೂ ತೋಚದೆ ಪದ್ಮಿನಿ, ಆ ಹುಡುಗಿಯನ್ನು ತನ್ನೊಡನೆ ನಿಲ್ಲಿಸಿಕೊಂಡು ನಿಂತಿದ್ದಳು. ಆ ಹುಡುಗಿ ನಿರ್ಭಯದಿಂದ ನಿಂತಿದ್ದಳು.

ಸುಮಾರು ಹತ್ತು ಹನ್ನೆರಡು ವರ್ಷದ ಹುಡುಗಿ, ಈ ವಯಸ್ಸಿನ ಹುಡುಗಿಯರು ಈ ಕಾಲದಲ್ಲಿ ವಿಮಾನದಲ್ಲಿ ಹೊರ ದೇಶಗಳಿಗೆ ಹೋಗಿ ಬರುತ್ತಾರೆ. ಈಗ ಈ ಹುಡುಗಿಯ ಜವಾಬ್ದಾರಿಯ ದೆಸೆಯಿಂದ, ನಾನೂ ಪೆದ್ದಳಂತೆ ಈ ಬಸ್‌ನಿಲ್ದಾಣದಲ್ಲಿ ನಿಲ್ಲಬೇಕಾಯಿತಲ್ಲ. ಸ್ವಲ್ಪವಾದರೂ ಜವಾಬ್ದಾರಿ ಬೇಡವೇ? ಆತ ನೋಡಿದರೆ ಬಸ್ಸು ಹತ್ತಿಸಿ ಬಿಟ್ಟ. ಇಲ್ಲಿ ನೋಡಿದರೆ ಯಾರೂ ಬಂದಿಲ್ಲ.

ಏನೋ ಹೊಳೆದವಳಂತೆ, ಬಸ್‌ಸ್ಟ್ಯಾಂಡಿನ ವಿಚಾರಣಾ ವಿಭಾಗದಲ್ಲಿ ತನ್ನ ಮನೆಯವರ ವಿಳಾಸವನ್ನು, ಫೋನಿನ ನಂಬರನ್ನು ಕೊಟ್ಟು, ಆ ಹುಡುಗಿಯನ್ನು ತನ್ನೊಡನೆ ಕರೆದೊಯ್ಯುತಿರುವುದನ್ನು ತಿಳಿಸಿ, ಒಂದು ಆಟೋ ಹಿಡಿದು, ತನ್ನ ಭಾವನ ಮನೆಗೆ ಬಂದಳು.

ಅಕ್ಕ, ಕುತೂಹಲದಿಂದ ಭರಣಿಯನ್ನು ನೋಡಿದಳು "ನಿನಗೆ ಇವಳು ಎಲ್ಲಿ ಸಿಕ್ಕದಳು?" ಆಶ್ಚರ್ಯದಿಂದ ಪ್ರಶ್ನಿಸಿದಳು.

"ಈ ಹುಡುಗಿ ಯಾರೂಂತ ನಿನಗೆ ಗೊತ್ತಾ?" ಎನ್ನುತ್ತಾ ಭರಣಿ ತನ್ನ ಜೊತೆ ಬಂದುದನ್ನು ಹೇಳಿದಳು.

"ಇಲ್ಲ ಯಾರೂಂತ ಗೊತ್ತಾಗ್ಲಿಲ್ಲ. ಆದರೆ ಮುಖವನ್ನು ಎಲ್ಲೋ ನೋಡಿದ ಹಾಗಿದೆ ಅಂತನ್ನಿಸ್ತು"

"ನನ್ನ ಜತೆ, ನ್ಯಾಷನಲ್ ಗರ್ಲ್ಸ್ ಹೈಸ್ಕೂಲಿನಲ್ಲಿ ಮೂಕಾಂಬಿಕ ಅಂತ ಒಬ್ಬಳು ಸಹಪಾಠಿ ಇದ್ದಳು. ಅವಳ ಹಾಗೇ ಇದಾಳೆ ಈ ಹುಡುಗಿ"

ಅಷ್ಟರಲ್ಲಿ ಇಬ್ಬರು ಗಂಡಸರು ಅವಳನ್ನು ಕೇಳಿಕೊಂಡು ಬಂದರು. ಪದ್ಮಿನಿ ಅವರ ಮೇಲೆ ಹುಸಿ ಕೋಪ ತೋರಿದಳು.

"ಅಲ್ಲಾ... ನಿಮ್ಮ ಮನೆ ಹುಡುಗೀನ ಕರೆದುಕೊಂಡು ಹೋಗೋಕೆ ಸಮಯಕ್ಕೆ ಸರಿಯಾಗಿ ಬರಬೇಡವೇ? ಒಂದು ವೇಳೆ ನಾನು ಕಿಡ್ನಾಪ್ ಮಾಡಿದ್ದರೇ?"

"ಇಂಥ ಹುಡುಗೀನ ಕಿಡ್ನಾಪ್ ಮಾಡಿ ನಿಮಗೇನು ಸಿಗುತ್ತಿತ್ತು ಮೇಡಂ? ನೀವು ಅವಳ ತಲೆ ಕಡಿದರೂ, ಅವಳು ನಿಮ್ಮೊಡನೆ ಏನನ್ನು ಹೇಳುತ್ತಿರಲಿಲ್ಲ ನಮಗೆ ಗೊತ್ತು"

"ಅದ್ಹೇಗೆ ಹೇಳ್ತೀರಿ? ರಸ್ತೆ ಉದ್ದಕ್ಕೂ ನಾನು ಭರಣಿ ಎಷ್ಟು ಮಾತಾಡಿದೆವು ಗೊತ್ತಾ?"

"ಖಂಡಿತಾ ಸುಳ್ಳು. ತಮಾಷೆ ಮಾಡ್ತಿದೀರಿ. ಅವಳು ಈ ಜನ್ಮದಲ್ಲಿ ಸರಿ ಹೋಗುವುದಿಲ್ಲವೆಂದು ಜ್ಯೋತಿಷಿಗಳೂ, ಡಾಕ್ಟರುಗಳೂ ಹೇಳಿ ಬಿಟ್ಟಿದಾರೆ.

ಹೀಗಿರುವುದು ಸಮಸ್ಯೆಯೇನಲ್ಲ. ಬೇಕಾದಷ್ಟು ಪರಿಹಾರಗಳಿರುತ್ತವೆ. ಕಾಲ ತುಂಬಾ ಬದಲಾಗಿದೆ. ಸರಿಯಾದ ಡಾಕ್ಟರಿಗೆ ತೋರಿಸಿ"

"ಇಲ್ಲ ಮೇಡಂ ಇದು ವಂಶಪಾರಂಪರ್ಯವಾಗಿ ಬಂದಿರುವ ಬಳುವಳಿ. ನಮ್ಮ ಸೋದರತ್ತೆ ಒಬ್ಬರು ಹೀಗೇ ಇದ್ರಂತೆ... ನಮ್ಮ ಹಿರಿಯಕ್ಕ ಒಬ್ಬಳು ಹೀಗೇ

ಇದಾಳೆ. ಈಗ ಈ ಭರಣಿ. ನಮ್ಮ ಅಣ್ಣನ ಮಗಳು. ಏನೂ ಪ್ರಯೋಜನವಿಲ್ಲ" ಒಬ್ಬ ಭರಣಿಯ ಕೈ ಹಿಡಿದುಕೊಂಡ.

"ನಿಮ್ಮ ಅಕ್ಕನ ಹೆಸರೇನು?" ಅಧೈರ್ಯದಿಂದ ಪ್ರಶ್ನಿಸಿದಳು ಪದ್ಮಿನಿ.

"ಮೂಕಾಂಬಿಕ..." ಪದ್ಮಿನಿಯ ಮೈ ತಣ್ಣಗಾದಂತಾಯಿತು.

"ಈಗ ಅವಳು ಎಲ್ಲಿದಾಳೆ? ಅವಳು ನನ್ನ ಸಹಪಾಠಿಯಾಗಿದ್ದಳು"

"ನಮ್ಮ ಮನೇಲೇ ಇದಾಳೆ. ಮದುವೆಯಾಗಲಿಲ್ಲ. ರಾಮಕೃಷ್ಣ ಅಂತ ಹಾಯಾಗಿದಾಳೆ. ಯಾರಿಗೂ ತೊಂದರೆ ಕೊಡೊಲ್ಲ... ನಡೀ ಭರಣೀ..."

"ಈಗ ಕಾಲ ಬದಲಾಗಿದೆ. ಭರಣಿಯ ಬಾಳನ್ನು ಹಾಳು ಮಾಡಬೇಡಿ" ಎಂದು ಹೇಳಲು ನೋಡಿದಳು. ಆದರೆ ಅವರುಗಳು ಬಾಗಿಲನ್ನು ದಾಟ ಬಿಟ್ಟಿದ್ದರು.

* *

## ಆದದ್ದೆಲ್ಲಾ ಒಳ್ಳೆಯದಕ್ಕೇ...

"ನಮಸ್ಕಾರ... ನಾನು ಶ್ರೀಹರಿ ಅಂತ" ಶ್ರೀಹರಿ ತನ್ನ ಪರಿಚಯವನ್ನು ಮಾಡಿಕೊಂಡ. ಶಾರದಾ ಅವನನ್ನು ಒಳಕ್ಕೆ ಆಹ್ವಾನಿಸಿದಳು.

"ಬನ್ನಿ, ನಾನು ಶಾರದಾ... ಶಂಕರ್‌ರವರ ಪತ್ನಿ"

"ಗೊತ್ತು ಗೊತ್ತು" ಶಾರದಾ ಆಶ್ಚರ್ಯವನ್ನು ಪ್ರಕಟಿಸಿದಳು. ಅಷ್ಟರಲ್ಲಿ ಒಳಗಿನಿಂದ ಶಂಕರ್ ನಿಧಾನವಾಗಿ ನಡೆದು ಬಂದ. ಶ್ರೀಹರಿ ಎದ್ದು ಅವನ ಕೈ ಕುಲುಕಿದ.

"ಕೂತ್ಕೋ ಶ್ರೀಹರಿ, ಹೇಗಿದೀಯ?" ಈಗ ಆಶ್ಚರ್ಯ ಪಡುವ ಸರದಿ ಅವನದಾಗಿತ್ತು.

"ನನ್ನ ಪರಿಚಯ ನಿಮಗಿದೆಯಾ?"

"ಹೂಂ... ಇಲ್ದೇ ಏನು? ನಾನ್ಯಾರು ಅಂತ ನಿಂಗೆ ಇನ್ನು ಗೊತ್ತಾಗ್ಲಿಲ್ಲ ಅಂತ ಕಾಣುತ್ತೆ"

"ಸಾರಿ ಗೊತ್ತಾಗ್ಲಿಲ್ಲ, ನೆನಪಿಗೆ ಬರ್ತಿಲ್ಲ" ಕಣ್ಣು ಮುಚ್ಚಿ, ನೆನಪಿಸಿಕೊಳ್ಳಲು ಪ್ರಯತ್ನಿಸಿ ಸೋತ.

"ನಾನು ಶಂಕ್ರೂ ಕಣೋ... ಗೋಪಾಲ ಮೇಷ್ಟ್ರ ಮೊಮ್ಮಗ" ಶ್ರೀಹರಿಯ ಮುಖ ಕಳೆಗುಂದಿತು, ಮೌನಿಯಾದ.

"ಯಾಕಪ್ಪಾ... ನನ್ನ ನೆನಪು ನಿನಗೆ ಇಷ್ಟವಾದಂತೆ ಅನ್ನಿಸಲಿಲ್ಲ"

"ಹಾಗೇನಿಲ್ಲ ಶಂಕ್ರೂ... ಯಾಕೆ ಗುರುತು ಸಿಗಲಿಲ್ಲ ಅಂತ ಯೋಚಿಸ್ತಿದ್ದೆ, ಹೇಗಿದೀಯ? ನೀನು ಇದೇ ಊರ್ನಲ್ಲಿ ಇದೀಯ ಅಂತ ನಂಗೆ ಗೊತ್ತಿರಲಿಲ್ಲ"

"ನಮಗೂ ನೀನು ಇದೇ ಊರ್ನಲ್ಲಿದೀಯ ಅಂತ ಗೊತ್ತಿರಲಿಲ್ಲ. ಆದರೆ ಫೋನಿನಲ್ಲಿ ನಿನ್ನ ಧ್ವನಿ ಕೇಳಿ ನೀನೇ ಅಂತ ಗೊತ್ತಾಯಿತು"

"ಆಗ಼್್ಲೇ ಯಾಕೆ ಹೇಳಲಿಲ್ಲ?"

"ಹೇಳಿದ್ದಿದ್ರೆ ನೀನು ಇಲ್ಲೀ ತನಕ ಬರ್ತಿದ್ದೆಯಾ?" ಶಂಕರ ನಕ್ಕ, ಶ್ರೀಹರಿ ನಗಲಿಲ್ಲ. ಶಾರದಾ ಕಾಫಿಯನ್ನು ಬಿಸ್ಕತ್ತನ್ನು ತಂದಿತ್ತಳು. ಅವಳು ಅತ್ತ ಮರೆಯಾದ ಕೂಡಲೇ ಶ್ರೀಹರಿ ಪ್ರಶ್ನಿಸಿದ.

"ಯಾವಾಗ ನಿನ್ನ ಮದುವೆಯಾಯ್ತು? ಮದುವೇನೇ ಆಗೊಲ್ಲ ಅಂತ ಹೇಳಿದ್ದೆಯಲ್ಲ"

"ಹೌದು... ಆಗ ಹಾಗೆ ನಿರ್ಧರಿಸಿದ್ದೆ. ಆದರೆ, ಪರಿಸ್ಥಿತಿ ಹೀಗೆ ಒದಗಿ ಬಂದಾಗ, ಇವಳನ್ನು ಮದುವೆಯಾದೆ. ನನ್ನ ಮಗನಿಗೆ ಈಗ ಇಪ್ಪತ್ತೇಳು ವರ್ಷಗಳು. ನಿನಗೆ ಅವನ ವಿಷಯ ಗೊತ್ತಿರಬೇಕಲ್ಲ" ಶ್ರೀಹರಿ ತಲೆದೂಗಿದ.

"ನನ್ನ ಮಗಳಿಗೂ ಇಪ್ಪತ್ತೇಳು ವರ್ಷ. ಇಬ್ಬರೂ ಒಂದೇ ಕಡೆಯಲ್ಲಿ ಕೆಲಸ ಮಾಡ್ತಾರೆ. ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸ್ತಾರಂತೆ"

"ಹೂಂ... ನಂಗೂ ವಿಷಯ ತಿಳಿದಿದೆ"

"ಇದು ನನ್ನ ಮಗಳ ಫೋಟೋ... ನಿಮ್ಮಿಬ್ಬರಿಗೂ ಹಿಡಿಸಿದರೆ?"

"ನನ್ನ ಮಗನಿಗೆ ಹಿಡಿಸಿ ಆಗಿದೆಯಲ್ಲ. ಇನ್ನು ನಮ್ಮಿಬ್ಬರಿಗೆ ಹಿಡಿಸಬೇಕಾದ ಅಗತ್ಯ ಏನಿದೆ?" ಶಂಕರ ಪ್ರಶ್ನೆಯನ್ನು ಒತ್ತಿ ಕೇಳಿದ.

"ಹಾಗಲ್ಲ;;

"ಇಬ್ಬರೂ ನಿರ್ಧರಿಸಿದ್ದಾರೆ, ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದಾರಂತೆ. ಮದುವೆಯ ಸೀಲ್ ಒಂದು ಬೇಕಾಗಿದೆ. ಉಳಿದದ್ದು ಏನೂ ಇಲ್ಲ"

"ನೀನು ತಪ್ಪು ತಿಳಿದಿದೀಯ. ನನ್ನ ಮಗಳು ಅಂಥವಳಲ್ಲ"

"ನಾನೆಲ್ಲಿ ಹಾಗಂದೆ? ನನ್ನ ಮಗನೇ ನನಗೆ ಎಲ್ಲವನ್ನು ಇ-ಮೇಲ್‌ನಲ್ಲಿ ತಿಳಿಸಿದ್ದಾನೆ. ನೀನು ಬಂದು ಮಾತಾಡುವುದಾಗಿ ಅವನೇ ತಿಳಿಸಿದ್ದ"

"ಹಾಗಾದ್ರೆ ನಿಮ್ಮಿಬ್ಬರಿಗೂ ಒಪ್ಪಿಗೆ ಅಂತನ್ನು. ಮದುವೆ ಯಾವಾಗ ಇಟ್ಟುಕೊಳ್ಳೋಣ?"

"ನಿನಗೆ ನಮ್ಮ ಸಂಬಂಧ ಹಿಡಿಸಿದೆಯಾ ಶ್ರೀಹರಿ?" ಶ್ರೀಹರಿಯ ಮುಖ ಕಪ್ಪಿಟ್ಟಿತು.

"ಯಾಕೆ ಹೀಗೆ ಕೇಳ್ತಿದೀಯ?" ಶ್ರೀಹರಿ ಸಂಶಯದಿಂದ ಕೇಳಿದ.

"ಸುಮ್ಮನೇ ಕೇಳಿದೆ..." ಶಂಕರನ ವ್ಯಂಗ್ಯ ನಗೆ ಅವನಿಗೆ ಕಂಡಿತ್ತು.

"ಇಲ್ಲಿ ಫೋಟೋ ಇದೆ. ಜಾತಕ ಇದೆ. ತೋರಿಸುವುದಾದರೆ..."

"ಈಗ ಇದರ ಅವಶ್ಯಕತೆ ಏನಿದೆ? ಏನೂ ಬೇಡ" ಶ್ರೀಹರಿ ಮತ್ತೆ ತೆಗೆದಿಟ್ಟುಕೊಂಡ.

"ಹಾಗಾದ್ರೆ ಮುಂದೆ?"

"ಮದುವೆಗೆ ಸಿದ್ಧತೆಗಳನ್ನು ಮಾಡೋದು..."

"ನಿನಗೆ ಏನೂ ಬೇಸರವಿಲ್ವಾ ಶಂಕ್ರೂ?"

"ಇಲ್ಲ... ನನಗೆ ಏನೂ ಬೇಸರವಿಲ್ಲ..." ಹಾಗೆ ಮೇಲೆ ಹೇಳಿದರೂ, ಒಳಗೆ ಮನ ಸ್ವಲ್ಪ ಕಲಕಿತ್ತು. ಅದನ್ನು ಹೊರಗೆಡವಲಿಲ್ಲ.

* * * * *

ಶಾರದಾ ಕ್ಲಿನಿಕ್‌ಗೆ ಹೊರಟು ಹೋಗಿದ್ದಳು. ಗಾರ್ಡನ್ನಿನ ಛೇರ್ ಮೇಲೆ ಕುಳಿತು ತಂಗಾಳಿಯ ಸೇವನೆ ಮಾಡುತ್ತಿದ್ದ. ಆದರೂ ಮನದೊಳಗೆ ಏನೋ ಧಗೆ! ಕೆಲವು ದಿನಗಳ ಹಿಂದೆ ಮಗ ಇ-ಮೇಲ್ ಮಾಡಿ ವಿಷಯವನ್ನು ತಿಳಿಸಿದ್ದ. ನಿಮ್ಮಿ ಎಂಬ ಹುಡುಗಿಯನ್ನು ಇಷ್ಟ ಪಟ್ಟಿರುವುದಾಗಿಯೂ. ಅವಳನ್ನೇ ಮದುವೆಯಾಗುವುದಾಗಿಯೂ ತಿಳಿಸಿದ್ದ. ಈ ವಿಷಯದಲ್ಲಿ ಗಂಡ ಹೆಂಡತಿಯರಲ್ಲಿ ಚರ್ಚೆ ನಡೆದಿತ್ತು.

"ನಿನ್ನ ಮಗ ಹೀಗೆ ಮಾಡ್ತಾನೆ ಅಂತ ನಾನಂದುಕೊಂಡಿರಲಿಲ್ಲ. ಓದುಕ್ಕೆ ಅಂತ ಹೋದ್ನೋ... ಪ್ರೀತಿಸೋಕೆ ಅಂತ ಹೋದ್ನೋ...?" ಶಂಕರ ಒದರಿದ್ದ.

"ಏನಾಯ್ತೀಗ... ಈ ವಯಸ್ನಲ್ಲಿ ಪ್ರೀತಿ ಪ್ರೇಮ ಎಲ್ಲಾ ಸಹಜ... ಅದೇನು ತಪ್ಪು... ಅವನ ಇಷ್ಟದಂತೆ ಮದುವೆ ಮಾಡಿ ಬಿಡೋಣ... ಎಲ್ಲಾ ಸರಿಹೋಗುತ್ತೆ"

"ಹಾಗಾದರೆ ನಮ್ಮ ಆಸೆ ಏನೂ ಇಲ್ಲವೆ?"

"ನಮ್ಮ ಆಸೆಗಳು ಬೇಕಾದಷ್ಟಿವೆ. ಆದರೆ ನಮಗೆ ಸಮಯವಿಲ್ಲ... ಅವನಿಗೆ ಬೇಕಾದವಳನ್ನು ಅವನೇ ಆರಿಸಿಕೊಂಡಿದಾನೆ. ಒಳ್ಳೇದೇ ಆಯ್ತು... ನಮ್ಮದೇನಿದೆ? ನಾವು ಗಂಡಿನವರು, ಎಲ್ಲಾ ಅವರದ್ದು" ಸಹನೆಯಿಂದ ಹೇಳಿದಳು.

"ಎಷ್ಟು ಸುಲಭವಾಗಿ ಹೇಳ್ತೀಯಲ್ಲ ಶಾರದಾ... ನಿನಗೆ ಏನೂ ಅನ್ನಿಸೊಲ್ವಾ?"

"ಅದನ್ನೆಲ್ಲಾ ಯೋಚಿಸೊಕ್ಕೆ ನನಗೆ ಬಿಡುವಿಲ್ಲ. ನೀವೂ ಯೋಚಿಸಬೇಡಿ. ನಿಮ್ಮ ಹೆಲ್ತ್ ಕೆಡುತ್ತೆ ಅಷ್ಟೇ..." ಶಾರದಾ ಕೈಯಲ್ಲಿ ಪುಸ್ತಕ ಹಿಡಿದು ಕುಳಿತಳು. ಶಂಕರ ಸರಿಯಾಗಿ ಮಲಗಿದ. ಮಲಗಿದ್ದ ಗಂಡನ ಕಡೆಗೆ ಒಮ್ಮೆ ನೋಡಿ ಶಾರದಾ ತಲೆ ಕೊಡಹಿದಳು. ಅವಳ ಮನಸ್ಸು ಕ್ಷುಬ್ಧಗೊಂಡಿತ್ತು.

ತಾಯಿಗೆ ಫೋನು ಮಾಡಿ, ಈ ಮೊದಲೇ ಮಗ ತನ್ನ ಫಿಯಾನ್ಸಿಯ ಬಗ್ಗೆ ತಿಳಿಸಿದ್ದ. ಮಮ್ಮೀ... ಅವಳ ಹೆಸರು ನಿಮ್ಮೀ ಅಂತ... ಪ್ರೆಟ್ಟಿ ಗರ್ಲ್ ಇಂಟರ್‌ನೆಟ್‌ನಲ್ಲಿ ಅವಳ ಫೋಟೋ ಅಟ್ಯಾಚ್ ಮಾಡಿದೀನಿ... ನೀನೇ ನೋಡು... ಯೂ ವಿಲ್ ಅಪ್ರಿಷಿಯೇಟ್ ಹರ್ ವೆರಿ ಮಚ್... ಐ ಆಮ್ ಶೂರ್..."

ಫೋಟೋದಲ್ಲಿ ಬರೀ ಅವಳೊಬ್ಬಳೇ ಇರಲಿಲ್ಲ. ಅವಳ ಹೆಗಲ ಮೇಲೆ ಕೈ ಹಾಕಿ ನಿಂತ ಮಗನೂ ಇದ್ದ. ಸ್ಕರ್ಟ್, ಸ್ಲೀವ್‌ಲೆಸ್ ಟಾಪ್ ಧರಿಸಿ, ಕೂದಲನ್ನು ಎತ್ತಿ ಕಟ್ಟಿದ್ದ ಹುಡುಗಿ, ಸ್ಕೂಲಿಗೆ ಹೋಗುವ ಹುಡುಗಿಯಂತೆಯೇ ಕಂಡಳು. ಅವಳ ಹೆಗಲ ಮೇಲೆ, ಸಲುಗೆಯಿಂದ ಕೈ ಹಾಕಿ ನಿಂತಿದ್ದ ಮಗನ ಭಂಗಿ. ಅವರಿಬ್ಬರ ಗೆಳೆತನ ಎಷ್ಟು ಮುಂದುವರೆದಿದೆ ಎನ್ನುವುದನ್ನು ತೋರಿಸಿತ್ತು. ನಿಟ್ಟುಸಿರು ಬಿಟ್ಟಳು. ಅವಳಿಗೆ ನಿರಾಸೆಯಾಗಿತ್ತು. ಒಬ್ಬನೇ ಮಗ... ಹೊತ್ತಿದ್ದು ನಾನು, ಹೆತ್ತಿದ್ದು ನಾನು, ಹಾಲುಡಿಸಿ ಬೆಳೆಸಿದ್ದು ನಾನು... ಅವನ ಓದು ಬರಹ, ವಿದ್ಯಾಭ್ಯಾಸಕ್ಕೆ ತಾನು ಗಮನ ಕೊಡುತ್ತಿದ್ದುದೂ ಸುಳ್ಳಲ್ಲ. ಮಗನನ್ನು ಮುಂದಕ್ಕೆ ತರಬೇಕೆಂಬ ಹಂಬಲ... ಖರ್ಚು ವೆಚ್ಚ ಸಹ ತನ್ನದೇ... ಮಗ ಡಾಕ್ಟರಾಗಲಿ ಎಂಬ ಆಸೆ ತನಗೆ. ಆದರೆ ಅವನ ಒಲವು ಇಂಜಿನಿಯರಿಂಗ್ ಕಡೆ. ಬಲವಂತ ಮಾಡಿ ಓದಿಸಲಾಗುವುದಿಲ್ಲ ಎಂದುಕೊಂಡು ಅವನ ಇಚ್ಛೆಗೆ ಬಿಟ್ಟಿದ್ದಾಗಿತ್ತು. ನಂತರ ಹೈಯರ್ ಸ್ಟಡೀಸ್‌ಗೆಂದು ವಿದೇಶಕ್ಕೆ ಹೊರಡುವ

ಇಚ್ಛೆಯನ್ನು ಪ್ರಕಟಿಸಿದ. ಅದಕ್ಕೂ ವ್ಯವಸ್ಥೆ ಮಾಡಿದಳು. ಗಂಡ ಬೇಡ ಎಂದಿದ್ದ.

"ಹೋಗಿ ಬರಲಿ ಬಿಡಿ... ಬೇಡ ಅಂತ ಯಾಕೆ ಅಂತೀರಿ? ಅವನಿಗೆ ಆಸಕ್ತಿ ಇದೆ. ನಮಗೆ ಅನುಕೂಲವಿದೆ..." ಗಂಡನನ್ನು ಒಪ್ಪಿಸಿದ್ದಳು. ಎಂಎಸ್ ಮಾಡಿದ ನಂತರ ಅಲ್ಲಿಯೇ ಕೆಲಸಕ್ಕೆ ಸೇರಿದ್ದ. ಈಗ ಇದು... ಮದುವೆಗೆ ಅರ್ಜೆಂಟೇನಿತ್ತು? ತಾನು ಹುಡುಕಿ ಮಾಡುತ್ತಿರಲಿಲ್ಲವೇ? ಮಗ ಇಂಜಿನಿಯರ್ ಆದರೇನಾಯ್ತು? ಸೊಸೆಯಾದರೂ ಡಾಕ್ಟರಾಗಲಿ ಎಂಬ ಆಸೆ... ಆಸೆಯಾಗಿಯೇ ಉಳಿದು ಬಿಟ್ಟಿತ್ತು. ನಾವು ಬೇಡ ಅನ್ನಲಿ; ಬೇಕು ಅನ್ನಲಿ... ಅವರಿಬ್ಬರಂತೂ ಒಟ್ಟಿಗೇ ವಾಸ ಮಾಡುತ್ತಿದ್ದಾರೆ. ಇನ್ನೇನು ಉಳಿದಿದೆ?..." ಮನದಲ್ಲಿ ಏನೋ ಕೊರತೆ.

* * * * *

ಶ್ರೀಹರಿ ವಾಸಂತಿ ದಂಪತಿಗಳಿಗೆ, ನಿರ್ಮಲ ಸ್ವಂತ ಮಗಳಲ್ಲ. ತಂಗಿಯ ಮಗಳನ್ನು ಶ್ರೀಹರಿ ತಾನೇ ಸಾಕಿಕೊಂಡಿದ್ದ. ನಿರ್ಮಲ ತಾನು ಶಶಾಂಕನನ್ನು ಪ್ರೀತಿಸುತ್ತಿರುವುದಾಗಿಯೂ ಅವನನ್ನೇ ಮದುವೆಯಾಗುವುದಾಗಿ ಹಠ ಹಿಡಿದಾಗ, ಶ್ರೀಹರಿ ಈ ವಿಷಯವನ್ನು ತನ್ನ ತಂಗಿ ವಿಮಲಳಿಗೆ ತಿಳಿಸಿದ. ವಿಮಲ ಮೊದಲಿಗೆ, ಚಿಂತಿತಳಾದರೂ ನಂತರ ತನ್ನ ಒಪ್ಪಿಗೆಯನ್ನು ಸೂಚಿಸಿದ್ದಳು. "ಶಶಾಂಕನ ಮನೆಯವರ ಹತ್ತಿರ ಮಾತನಾಡಿ, ಮದುವೆಯ ದಿನವನ್ನು ಗೊತ್ತು ಮಾಡು... ಇಬ್ಬರೂ ಒಟ್ಟಿಗೇ ವಾಸವಾಗಿದ್ದಾರೆಂದ ಮೇಲೆ ಅವರ ಸಂಬಂಧ ಗಂಡ ಹೆಂಡತಿಯರಾಗಿ ಮುಂದುವರೆದರೇ ಒಳ್ಳೆಯದು ಅಂತ ನನ್ನ ಅಭಿಪ್ರಾಯ" ಅಂತ ನುಡಿದಿದ್ದಳು, ಉದಾಸೀನದಿಂದ.

"ನನ್ನ ಅಭಿಪ್ರಾಯವೂ ಅದೇ. ನನಗೆ ಒಂದ್ಮಾತು ಹೇಳಲಿಲ್ಲ ಅಂತ ನೀನು ಆಕ್ಷೇಪಿಸಬಾರದು ಅಂತ ನಿನಗೆ ಹೇಳಿದೆ. ಇಂಥ ವಿಷಯಗಳು ಸಂಬಂಧವನ್ನೇ ಕೆಡಿಸಿಬಿಡುತ್ತವೆ" ಶ್ರೀಹರಿ ನುಡಿದಾಗ, ವಿಮಲ ಕತ್ತು ತಗ್ಗಿಸಿದಳು. ವಿಮಲಳಿಗೆ ತನ್ನ ಕಾಲೇಜಿನ ದಿನಗಳು ನೆನಪಿಗೆ ಬಂದಿದ್ದವು. ತಾನು ಪ್ರೀತಿಸಿದ್ದವನನ್ನು ನೆನೆಪಿಸಿಕೊಂಡಳು. ಅವನು ತನ್ನನ್ನು ನಿರಾಕರಿಸಿದ್ದ ದಿನ, ತಾನು ಆತ್ಮಹತ್ಯೆಗೆ ಪ್ರಯತ್ನಿಸಿದ್ದು ನೆನೆಪಿಗೆ ಬಂತು. ಈ ಸಮಯದಲ್ಲಿ ಪ್ರಭಾಕರ ತನ್ನ ಬಾಳಿನಲ್ಲಿ ಪ್ರವೇಶಿಸದೇ ಇದ್ದಿದ್ದರೇ... ಈ ದಿನ ತಾನು ಈ ಪ್ರಪಂಚದಲ್ಲೇ ಇರುತ್ತಿರಲಿಲ್ಲ. ಆದರೂ, ಏನೋ ವ್ಯಥೆ, ಏನೋ ದುಗುಡ... ತಾನು ಪ್ರೀತಿಸಿದ್ದವನು, ತನ್ನನ್ನು ಮದುವೆಯಾಗಲಿಲ್ಲ. ತಾನು ಮದುವೆಯಾದವನನ್ನು ತಾನು ಪ್ರೀತಿಸಲಾಗುತ್ತಿಲ್ಲ. ಆದರೂ ಸೃಷ್ಟಿ ನಿಯಮ ಎಂಬಂತೆ ಮಕ್ಕಳು ಹುಟ್ಟಿದವು. ನಿರ್ಮಲ ಹುಟ್ಟಿದ ದಿನಗಳು ನೆನಪಾದವು. ಬಸಿರಲ್ಲಿ ಮಗುವು ಮಿಸುಕಾಡುವವರೆಗೂ, ಭ್ರೂಣವನ್ನು ಕರಗಿಸುವ ಪ್ರಯತ್ನಗಳನ್ನು ಮಾಡಿದಳು. ನಂತರವೂ ಮಗುವಿನ ಬಗ್ಗೆ ವಿಶೇಷ ಮಮಕಾರ ಬೆಳೆದಿರಲಿಲ್ಲ. ಈ ವಿಷಯದ ಅರಿವಾದದ್ದು ವಿಮಲಳ ತಾಯಿಗೆ... ಅವಳ ಖಿನ್ನತೆ... ಅವಳ ಉದಾಸೀನ ತಾಯಿಗೆ ಆತಂಕವನ್ನುಂಟು ಮಾಡಿತ್ತು. ಈ ವಿಷಯ ಶ್ರೀಹರಿಗೂ, ಅವಳ ಗಂಡ ಪ್ರಭಾಕರನಿಗೂ ತಿಳಿಯಿತು. ಹೆರಿಗೆ ಆದ ಮೇಲೆ, ಮಗುವನ್ನು ಅವಳ ತಾಯಿಯೇ ನೋಡಿಕೊಳ್ಳುತ್ತಿದ್ದರು. ಶ್ರೀಹರಿಯ ಪ್ರೀತಿಯ ಕೂಸಾಗಿ ಬೆಳೆದಳು ನಿರ್ಮಲ. ವಿಮಲ ನಿರಾತಂಕವಾಗಿದ್ದುದು

ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತ್ತು. ಆ ನಂತರ ವಿಮಲಳಿಗೆ ಯಾವ ಆಸಕ್ತಿ ಇಲ್ಲದಿದ್ದರೂ, ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಈಗ ವಿಮಲ ಸ್ವಲ್ಪ ಮಟ್ಟಿಗೆ ಹಳೆಯ ದಿನಗಳನ್ನು ಮರೆತಳು. ಗಂಡು ಮಕ್ಕಳನ್ನು ಪ್ರೀತಿಯಿಂದ ಸಾಕಿದಳು.

* * * * *

"ಶ್ರೀಹರಿ ಹೇಳ್ದ... ತಾನೇ ಗಂಡನನ್ನು ಆಯ್ಕೆ ಮಾಡಿಕೊಂಡಿದಾಳಂತೆ ನಮ್ಮ ಮಗಳು. ನನಗೆ ಸರಿ ಅನ್ನಿಸ್ತಿಲ್ಲ" ಪ್ರಭಾಕರ ಹೆಂಡತಿಗೆ ಹೇಳಿದ.

"ಏನಾದರೂ ಮಾಡ್ಕೊಳ್ಳಲಿ, ಅವಳು ನಮ್ಮ ಮಗಳಲ್ಲ"

"ಏನ್ಮಾತಾಡ್ತೀ ವಿಮ್ಮು... ನಿಮ್ಮಿ ನಮ್ಮ ಮಗಳು... ಶ್ರೀಹರಿಗೆ ಹುಟ್ಟಿದವಳಲ್ಲ. ಅವಳ ಹಕ್ಕು ನಮ್ಮದು. ಅವಳನ್ನು ಅವನ ವಶಕ್ಕೆ ಕೊಟ್ಟು ತಪ್ಪು ಮಾಡಿದೆವು ನಾವು"

"ಇಲ್ಲ, ತಪ್ಪೇನಾಗಿಲ್ಲ. ಎಲ್ಲಾ ಸರಿಯಾಗಿಯೇ ಇದೆ"

"ಈಗಲೂ ಅವಳನ್ನ ಯಾಕೆ ಅಷ್ಟು ದ್ವೇಷಿಸ್ತೀಯಾ? ಅವಳು ಹೆಣ್ಣಾಗಿ ಹುಟ್ಟಿದ್ದು ತಪ್ಪೇ... ನಾನು ಒಪ್ಪಬಾರದಾಗಿತ್ತು ಅಂತ ಈಗ ಅನ್ನಿಸ್ತಿದೆ... ನಮ್ಮ ಮಗಳನ್ನು ನಮ್ಮ ಬಳಿಯೇ ಇಟ್ಟುಕೊಳ್ಳಬೇಕಾಗಿತ್ತು"

"ಪ್ಲೀಸ್... ಈ ವಿಷಯದಲ್ಲಿ ಚರ್ಚೆ ಬೇಡ... ಶ್ರೀಹರಿ ಅವಳನ್ನು ಚೆನ್ನಾಗಿಯೇ ಬೆಳೆಸಿದಾನೆ. ನಾನು ಕೂಡಾ ಹಾಗೆ ಬೆಳೆಸುತ್ತಿರಲಿಲ್ಲ. ಅತ್ತಿಗೆ ಅಷ್ಟು ಚೆನ್ನಾಗಿ ನೋಡಿಕೊಂಡಿದಾರೆ"

"ಇರಬಹುದು, ವಿಮ್ಮು... ಆದರೆ ನಿಮ್ಮಿಯ ಬಗ್ಗೆ ಒಂದು ಮಾತನಾಡುವ ಸ್ವಾತಂತ್ರ್ಯವೂ ನಮಗಿಲ್ಲವಲ್ಲ"

"ಇಲ್ಲ... ಬೇಡ ಬಿಡಿ..."

"ನೀನ್ಯಾಕೆ ಹೀಗೆ ಮಾತಾಡ್ತೀಯೋ... ನೀನೊಬ್ಬಳು ವಿಚಿತ್ರ ಹೆಂಗಸು..."

"ನನ್ನನ್ಯಾಕೆ ಮದುವೆಯಾದ್ರಿ?... ನನ್ನನ್ಯಾಕೆ ಉಳಿಸಿದಿರಿ?..."

"ಅದಕ್ಕೆ ಈ ಶಿಕ್ಷೇನಾ?..."

"ಶಿಕ್ಷೆ ಅಂತ ಯಾಕೆ ಅಂದುಕೊಳ್ತೀರಿ? ಅದಕ್ಕೆ ಬೇರೆ ಕಾರಣಗಳಿವೆ..."

"ಏನು ಕಾರಣ ಅಂತ ನಂಗೂ ಗೊತ್ತು... ಆದರೆ ಅದು ನಿಜವಲ್ಲ"

"ನಿಜವೋ ಸುಳ್ಳೋ ಅಂತ ನಂಗೆ ಗೊತ್ತು. ನಿಮಗೆ ಹೇಗೆ ಗೊತ್ತಾಗುತ್ತೆ?"

"ನಿನ್ನ ಹತ್ರ ವಾದ ಮಾಡಿ ಪ್ರಯೋಜನವಿಲ್ಲ, ನಾನು ಸೋತೆ. ಆದರೆ ನಿಮ್ಮಿ ಬಾಳು ಮಾತ್ರ ಹಾಳಾಗಬಾರದು. ಹಾಗೇನಾದ್ರೂ ಆದ್ರೆ ನಾನು ನಿನ್ನ ಅಣ್ಣ ಅತ್ತಿಗೆಯರನ್ನು ಸುಮ್ಮನೆ ಬಿಡೋಲ್ಲ" ಪ್ರಭಾಕರ ರೋಷದಿಂದ ಎದ್ದು ಹೋಗಿದ್ದ.

* * * * *

ಮದು ಮಕ್ಕಳಿಬ್ಬರೂ ಕೈ ಕೈ ಹಿಡಿದು, ಏರ್‌ಪೋರ್ಟ್‌ನಿಂದ ಹೊರಬಂದರು. ಅವರಿಬ್ಬರಿಗಾಗಿ ಕಾಯುತ್ತಾ ನಿಂತಿದ್ದ ಶಂಕರ, ಶ್ರೀಹರಿ ಪರಸ್ಪರ ಮುಖ ಮುಖ ನೋಡಿಕೊಂಡರು. ನಿಮ್ಮಿ ಓಡಿ ಬಂದು ಶ್ರೀಹರಿಯನ್ನು ತಬ್ಬಿಕೊಂಡಳು. ಅವನು ಅವಳ ತಲೆ ನೇವರಿಸಿದ. ಶಶಾಂಕ, ಶಂಕರನ ಕಡೆ ಕೈಯಾಡಿಸಿ "ಹಾಯ್ ಡ್ಯಾಡ್... ಮಮ್ಮಿ ಬರ್ಲಿಲ್ವಾ? ಅಂತ ಕೇಳಿದ. ಶಂಕರ ಇಲ್ಲ ಎನ್ನುವಂತೆ ತಲೆಯಾಡಿಸಿ, ತನ್ನ ಸೊಸೆಯಾಗುವವಳ ಮುದ್ದು ಮುಖವನ್ನೇ ನೋಡಿದ.

"ನಿಮ್ಮೀ... ಇವರು ನಮ್ಮ ತಂದೆ..." ಶಶಾಂಕ ಪರಿಚಯಿಸಿದ.

"ಹಲೋ... ಅಂಕಲ್..."

"ನಮಸ್ಕಾರ ಮಾಡು..." ಶಶಾಂಕ ಸಂಜ್ಞೆ ಮಾಡಿದ. ಅವಳು ಕೈ ಮುಗಿದು "ನಮಸ್ಕಾರ ಅಂಕಲ್" ಎಂದಳು. ಶಶಾಂಕ ಹಣೆ ಚಚ್ಚಿಕೊಂಡ. ಇಬ್ಬರೂ ನಕ್ಕರು.

"ಇರಲಿ ಬಿಡು, ಏರ್‌ಪೋರ್ಟನಲ್ಲಿ ಆ ಸಂಪ್ರದಾಯಗಳೆಲ್ಲ ಏಕೆ?" ಶಂಕರನೆಂದ ಎಲ್ಲರೂ ಅಲ್ಲಿಂದ ಹೊರಬಿದ್ದರು.

* * * * *

"ನಿಮ್ಮೀನ ನಮ್ಮ ಮನೆಗೆ ಕರ್ಕೊಂಡು ಹೋಗ್ತೀನಿ ಅಂಕಲ್... ಮಮ್ಮಿಗೆ ತೋರಿಸ್ಬೇಕು" ಶಶಾಂಕನೆಂದಾಗ, ಶ್ರೀಹರಿ ಮಿಕಿ ಮಿಕಿ ನೋಡಿದ.

"ಇವತ್ತು ಬೇಡ ಶಶಾಂಕ್, ನಿಮ್ಮಿಬ್ಬರ ಎಂಗೇಜ್‌ಮೆಂಟ್ ಆಗಿದೆ. ವಾರದೊಳಗೆ ಮದುವೆಯೂ ಆಗುತ್ತೆ. ಆಮೇಲೆ ಸಾಂಪ್ರದಾಯಕವಾಗಿ ಮನೆ ತುಂಬಿಸಿಕೊಳ್ಳೋಣ" ಶಶಾಂಕ, ನಿಮ್ಮಿಯ ಕೈ ಚಿವುಟಿ ನಕ್ಕ.

"ಹೌದು.. ಶಶಾಂಕ್. ಇನ್ನು ಕೆಲವೇ ದಿನ, ಈಗ ನಮ್ಮ ನಮ್ಮ ಮನೆಗೆ ಹೋಗೋಣ..." ನಿಮ್ಮಿ ನುಡಿದಾಗ, ಶಶಾಂಕ ಅವಳ ಬೆನ್ನ ಮೇಲೆ ಏಟು ಹಾಕಿದ.

"ಡ್ಯಾಡೀನ ಕಂಡ ಕೂಡ್ಲೇ... ನಾನು ದೂರ ಆಗಿ ಬಿಟ್ನಾ?"

"ದೂರ ಎಲ್ಲಿ? ಈಗ ನಾಲ್ಕು ದಿನ ಪೇರೆಂಟ್ಸ್ ಜೊತೆ... ಪ್ಲೀಸ್" ನಿಮ್ಮಿ ರಾಗ ಎಳೆದಳು. ಶಶಾಂಕ ಅವಳನ್ನು ತನಗೆ ಒತ್ತಿಕೊಂಡು ನುಡಿದ.

"ಓ.ಕೆ... ಡಾರ್ಲಿಂಗ್... ನಿನ್ನ ಇಷ್ಟ... ಆದರೆ ನಾಳೆ ನೀನು ನನ್ನ ಜೊತೆ ಷಾಪಿಂಗ್‌ಗೆ ಬರ್ತಿದೀಯ ದಟ್ಸಾಲ್.. ಬೈ ಬೈ..." ಕೈಯಾಡಿಸಿ ಟ್ಯಾಕ್ಸಿಯನ್ನೇರಿದ. ನಿಮ್ಮಿ ಶ್ರೀಹರಿಯ ಕಾರು ಇದ್ದೆಡೆಗೆ ನಡೆದಳು.

ಶಂಕರನಿಗೆ, ಮಗನೊಡನೆ ಮಾತನಾಡುವುದಕ್ಕೆ ಯಾವ ವಿಷಯವೂ ಇಲ್ಲ ಎನ್ನುವಷ್ಟು ಮೌನ ಆವರಿಸಿಕೊಂಡಿತು. ಸೊಸೆಯಾಗುವವಳ ಬಗ್ಗೆ ಚಿಂತಿಸುತ್ತಿದ್ದ. ಪ್ಯಾಂಟು, ಟಾಪ್, ಧರಿಸಿ ತಲೆಗೂದಲನ್ನು ಕತ್ತರಿಸಿ, ಹೈ ಹೀಲ್ಡ್ ಷೂಗಳನ್ನು ಧರಿಸಿ ಆಧುನಿಕ ಹಾವಭಾವಗಳೊಡನೆ, ಹಿರಿಯರ ಎದುರಿಗೇ, ಸಲುಗೆಯಿಂದ ಮಾತುಗಳನ್ನಾಡುತ್ತಾ, ಖುಷಿ ಖುಷಿಯಾಗಿದ್ದವಳ ಬಗ್ಗೆ ಯಾವ ಮಧುರ ಭಾವನೆಗಳೂ ಹುಟ್ಟಲಿಲ್ಲ. ನಮ್ಮ ಕಾಲಕ್ಕೂ ಈ ಕಾಲಕ್ಕೂ ಅಜಗಜಾಂತರ... ಶಾರದಂಗೆ ಈ ಸೊಸೆ ಹಿಡಿಸುವಳೋ ಇಲ್ಲವೋ... ಮನಸ್ಸು ತನ್ನ ಕಾಲಕ್ಕೆ ಹಿಂದಕ್ಕೆ ಓಡಿತ್ತು.

